# ಛಂದಸ್ಸಾರ

PUBLISHED BY THE

...ON PRESS AND BOOK DEPOT

...ANGALORE

1927



Price: ... Annas.

ಬೆಲೆ: ೪ ಆಣೆ.




ವಿದ್ಯಾಶಾಲಾಖಾತೆ.

# ಛಂದಸ್ಸಾರ

ಈ ಪುಸ್ತಕವನ್ನು ಕನ್ನಡ ವಿದ್ಯಾರ್ಥಿಗಳ ಸಲುವಾಗಿ
ಧಾರವಾಡ ಶಿಕ್ಷಕ ಶಿಕ್ಷಣ ವಿದ್ಯಾಲಯದ ಕನ್ನಡ ಗುರುಗಳಾಗಿದ್ದ

**ಧೋಂಡೋ ನರಸಿಂಹ ಮುಳಬಾಗಲ್**

ಇವರು ರಚಿಸಿದರು.

ಏಳನೇ ಆವೃತ್ತಿ, ೫೦೦೦ ಪ್ರತಿಗಳು.





ಮಂಗಳೂರು
ಬಾಸೆಲ್ ಮಿಶ್ಯನ್ ಪ್ರೆಸ್ ಮತ್ತು ಬುಕ್ ಡಿಪೊ
೧೯೨೭



ಬೆಲೆ: ೪ ಆಣೆ.

# ೨ನೇ ಆವೃತ್ತಿಯ ಪ್ರಸ್ತಾವನೆಯು.

---

ಹೊಸದಾಗಿ ಕವಿತೆಗಳನ್ನು ಓದುವವರೂ ರಚಿಸುವವರೂ ಛಂದಶ್ಶಾಸ್ತ್ರವನ್ನು ಅವಶ್ಯವಾಗಿ ಕಲಿಯಬೇಕಾಗುತ್ತದೆ. ಈಗ ವಿದ್ಯಾಖಾತೆಯ ಯಾವದೊಂದು ಪರೀಕ್ಷೆಗಾದರೂ ಕವಿತಾಭ್ಯಾಸವು ಬೇಕೇ ಬೇಕು. ಆದರೂ ನಮ್ಮ ಕನ್ನಡ ಭಾಷೆಯಲ್ಲಿ ಛಂದಶ್ಶಾಸ್ತ್ರದ ಮರ್ಮವನ್ನು ಸುಲಭವಾಗಿ ತಿಳಿಸುವ ಗ್ರಂಥವು ಒಂದೂ ಇಲ್ಲ. ಅದರಿಂದ ಈಗ ಕನ್ನಡ ವಿದ್ಯಾರ್ಥಿಗಳಿಗೂ ಅವರ ಬೋಧಕರಿಗೂ ಕವಿತೆಯ ಯಥಾರ್ಥ ಜ್ಞಾನವು ಬಹುಶಃ ಇಲ್ಲೆಂದರೂ ಸಲ್ಲುವದು. ಎಷ್ಟೋ ಜನರು ರಚಿಸಿದ ಹೊಸ ಕವಿತೆಗಳು ಅಶುದ್ಧವಾಗಿರುತ್ತವೆ. ಈಗ ಕನ್ನಡ ವಿದ್ಯಾರ್ಥಿಗಳು ಕಲಿಯುವ ಕವಿತಾಪದ್ಧತಿಯು ಬಹುಶಃ ಅಶುದ್ಧವಾಗಿದೆ. ಮತ್ತು ಅದರಲ್ಲಿ ಅನೇಕ ನ್ಯೂನತೆಗಳಿರುತ್ತವೆ. ಅದಕ್ಕೆ ಆಧಾರವಾದ "ನಾಗವರ್ಮನ ಛಂದಶ್ಶಾಸ್ತ್ರ" ಎಂಬ ಗ್ರಂಥವಾದರೂ ಅಸ್ಪಷ್ಟ ವಚನಗಳಿಂದಲೂ ಎಷ್ಟೋ ಕೊರತೆಗಳಿಂದಲೂ ನಿರರ್ಥಕ ಶಬ್ದಗಳಿಂದಲೂ ವ್ಯಾಕರಣವಿರುದ್ಧ ಪ್ರಯೋಗಗಳಿಂದಲೂ ತುಂಬಿರುವ ಕಾರಣ ವಿದ್ಯಾರ್ಥಿಗಳಿಗೆ ಕಲಿಸುವ ಹಾಗೆ ಇಲ್ಲ.

ಆದ್ದರಿಂದ ೬ನೇ ಸ್ಟ್ಯಾಂಡರ್ಡಿನ ವಿದ್ಯಾರ್ಥಿಗಳಿಗೂ ನಮ್ಮ ಟ್ರೇನಿಂಗ್ ಕಾಲೇಜದ ವಿದ್ಯಾರ್ಥಿಗಳಿಗೂ ಕಲಿಸಲಿಕ್ಕೆ ಯೋಗ್ಯವಾದ ಪುಸ್ತಕವಿರಬೇಕೆಂಬ ಉದ್ದೇಶದಿಂದ ಅನೇಕ ಹಳಗನ್ನಡ ಸಂಸ್ಕೃತ ಗ್ರಂಥಗಳ ಸಹಾಯದಿಂದ ನಮ್ಮ ಕೈಲಾದಷ್ಟು ಶುದ್ಧ ರೀತಿಯಿಂದ "ಛಂದಸ್ಸಾರ" ಎಂಬ ಈ ಗ್ರಂಥವನ್ನು ಸಿದ್ಧ ಮಾಡಿದ್ದೇವೆ. ಇದರಲ್ಲಿಯಾದರೂ ಕೆಲವು ದೋಷಗಳು ಇರಬಹುದು. ಅವನ್ನು ನಮಗೆ ವಿದ್ವಾಂಸರು ದಯಮಾಡಿ ತಿಳಿಸಿದರೆ, ಮೂರನೆಯ ಆವೃತ್ತಿ ಛಾಪಿಸುವಾಗ ತಿದ್ದುವೆವು. ಈ ಗ್ರಂಥವು ಆರನೆಯ

ಇಯತ್ತೆಯವರಿಗೂ ಟ್ರೇನಿಂಗ್ ಕಾಲೇಜದ ವಿದ್ಯಾರ್ಥಿಗಳಿಗೂ ಉಪಯೋಗಿಸಬೇಕೆಂದು ರಚಿಸಲ್ಪಟ್ಟದೆ. ಆರನೆಯ ಇಯತ್ತೆಯವರಿಗೆ ಬೇಕಾದ ಭಾಗವನ್ನು ಮಾಸ್ತರರು ಆರಿಸಿಕೊಂಡು ವಿದ್ಯಾರ್ಥಿಗಳಿಗೆ ಹೇಳಬೇಕು.

ಇದರಲ್ಲಿರುವ ಕಠಿನ ಶಬ್ದಗಳ ಕೋಶವನ್ನು ಗ್ರಂಥದ ಕಡಿಗೆ ಕೊಟ್ಟಿರುತ್ತೇವೆ. ಅದರ ಸಹಾಯದಿಂದ ಯಾವತ್ತು ಕವಿತೆಗಳ ಅರ್ಥವು ಸುಸೂತ್ರ ತಿಳಿಯುವಂತೆ ಅದೆ. ಆದಕಾರಣ ಮಾಸ್ತರ ಜನರು ವಿದ್ಯಾರ್ಥಿಗಳಿಗೆ ಅರ್ಥವನ್ನು ತಾವೇ ತಿಳುಹಿ ಹೇಳಬೇಕೇ ಹೊರತು ಬೇರೆ ಟೀಕಾಪುಸ್ತಕವನ್ನು ಅಪೇಕ್ಷಿಸಬಾರದು. ಹೀಗೆ ಬರಿದು ಇಲ್ಲಿ ವಿಶೇಷವಾಗಿ ತಿಳಿಸುವದಕ್ಕೆ ಈಗಿನ ಕವಿತೆಯ ಒಂದನೇ ಎರಡನೇ ಪುಸ್ತಕಗಳಿಗೆ ಆಗಿರುವ ಅನೇಕ ಅಬದ್ಧ ಟೀಕಾಪುಸ್ತಕಗಳಿಂದ ಹುಡುಗರಿಗೆ ಆಗುತ್ತಿರುವ ಅನ್ಯಥಾ ಜ್ಞಾನವೇ ಕಾರಣವಾಗಿರುತ್ತದೆ.

ಯತಿಸ್ಥಾನವನ್ನೂ ಪ್ರಸ್ತಾರದ ಲಕ್ಷಣವನ್ನೂ ಒಮ್ಮೆ ಮಾತ್ರ ಹೇಳಿದ್ದೇವೆ, ಪ್ರತಿ ಕವಿತೆಗೆ ತೋರಿಸಿಲ್ಲ; ಯಾಕಂದರೆ ಅದನ್ನು ಶಿಕ್ಷಕರು ವಿದ್ಯಾರ್ಥಿಗಳಿಂದ ಪ್ರಶ್ನದ್ವಾರದಿಂದ ಹೊರಡಿಸಬೇಕೆಂದು ನಮ್ಮ ಉದ್ದೇಶವಿರುತ್ತದೆ.

ಗಣಸಂಜ್ಞಾಕ್ಷರಗಳು ಉಳಿದ ಅಕ್ಷರಗಳಲ್ಲಿ ಕೂಡಿ, ವಿದ್ಯಾರ್ಥಿಗಳಿಗೆ ಕವಿತಾಲಕ್ಷಣಗಳನ್ನು ತಿಳಿದುಕೊಳ್ಳುವದು ಕಠಿನವಾದೀತೆಂದು ಆ ಅಕ್ಷರಗಳ ಸ್ಥಾನದಲ್ಲಿ ದೊಡ್ಡ ಅಕ್ಷರಗಳನ್ನು ಹಾಕಿದ್ದೇವೆ.

ಕನ್ನಡ ಭಾಷೆಯಲ್ಲಿ ಅಕ್ಷರಗಣನೆಯ ಕವಿತೆಗಳು ಪೂರ್ವದಲ್ಲಿ ಇದ್ದಂತೆ ತೋರುವದಿಲ್ಲ. ಹಾಡು, ಲಾವಣಿ, ಷಟ್ಪದಿ ಮುಂತಾದ ಮಾತ್ರಾಗಣನೆಯ ಪದ್ಯಗಳೇ ತುಂಬಿರುತ್ತವೆ. ಇತ್ತಿತ್ತ ಸಂಸ್ಕೃತ ಕಲಿತವರು ಸಂಸ್ಕೃತದಲ್ಲಿರುವ ಅನೇಕ ಅಕ್ಷರಗಣನೆಯ ಪದ್ಯಗಳನ್ನೂ ಅವುಗಳೊಡನೆ ಮಾತ್ರಾಗಣನೆಯ ಪದ್ಯಗಳನ್ನೂ ರಚಿಸಿದ್ದಾರೆಂದು ತೋರುತ್ತದೆ. ಆದ್ದರಿಂದ ನಮ್ಮ ಕನ್ನಡದಲ್ಲಿ

ಸಂಸ್ಕೃತ ಕನ್ನಡ ಈಯೆರಡೂ ಪ್ರಕಾರದ ವೃತ್ತಗಳುಂಟು. ಕಾರಣ ಉಭಯವಿಧ ವೃತ್ತಗಳ ಲಕ್ಷಣಗಳನ್ನೂ ಇಲ್ಲಿ ಹೇಳಿದ್ದೇವೆ. ಮತ್ತು ಟ್ರೇನಿಂಗ್ ಕಾಲೇಜದ ವಿದ್ಯಾರ್ಥಿಗಳು ಸಂಸ್ಕೃತ ಕಲಿಯುತ್ತಿರುವ ಕಾರಣ ಅವರ ಉಪಯೋಗಕ್ಕಾಗಿ **उपजाति, अनुष्टुभ्** ಮುಂತಾದ ಕೇವಲ ಸಂಸ್ಕೃತ ವೃತ್ತಗಳ ಲಕ್ಷಣಗಳನ್ನು ಹೇಳುವದು ಅವಶ್ಯವಾಯಿತು.

ಎಷ್ಟೋ ಕನ್ನಡ ಗ್ರಂಥಗಳಲ್ಲಿ ದ್ವಿಪದಿ, ತ್ರಿಪದಿ, ತ್ರಿಪುಡೆ, ಚೌಪದಿ, ಷಟ್ಪದಿ, ಕಂದ, ಸೀಸಪದ್ಯ, ರಗಳೆ, ಮತ್ತೇಭ, ಉತ್ಪಲಮಾಲೆ, ಚಂಪಕಮಾಲೆ, ತರಳ, ಮಹಾಸ್ರಗ್ಧರಾ ಮುಂತಾದ ಕೆಲವು ವೃತ್ತಗಳು ಎಲ್ಲಿ ನೋಡಿದರೂ ತುಂಬಿರುತ್ತವೆ. ಉಳಿದವು ಅಪರೂಪವಾಗಿರುತ್ತವೆ.

ಆದರೂ ಯಾವದೊಂದು ಕಾವ್ಯವನ್ನು ರಚಿಸಬೇಕಾದರೆ, ಅನೇಕ ವೃತ್ತಗಳ ಜ್ಞಾನವಿದ್ದಷ್ಟು ರಚನೆಯು ಸುಸಾಧ್ಯವಾಗುತ್ತದೆ ಎಂಬದು ಸುಜ್ಞರಿಗೆ ಗೊತ್ತುಂಟು.

ಸಾರಾಂಶ – ಕನ್ನಡ ಕವಿತೆಗಳನ್ನು ಓದುವವರಿಗೂ, ಶಿಕ್ಷಕರಿಗೂ ಸ್ವಲ್ಪದರಲ್ಲಿ ಸುಲಭವಾಗಿ ಪದ್ಯಲಕ್ಷಣವು ತಿಳಿದು ಜ್ಞಾನಾಭಿವೃದ್ಧಿಯಾಗಬೇಕೆಂಬ ಬಯಕೆಯಿಂದ ಈ ಗ್ರಂಥವು ರಚಿಸಲ್ಪಟ್ಟದೆ. ಇದನ್ನು ಭಾಷಾಭಿಮಾನಿಗಳು ನಿರ್ವ್ಯಾಜ ಪ್ರೀತಿಯಿಂದ ಆದರಿಸಿದರೆ, ನಮ್ಮ ಶ್ರಮಕ್ಕೆ ತಕ್ಕ ಫಲವಾಯಿತೆಂದು ತಿಳಿಯುವೆವು.

ಧೋ. ನ. ಮು.

---

ಮೂರನೆಯಾವೃತ್ತಿಯಲ್ಲಿ ಎರಡನೆಯಾವೃತ್ತಿಯಲ್ಲಿ ಕಂಡುಬಂದ ಮುದ್ರಣದೋಷಗಳನ್ನು ಮಾತ್ರ ತಿದ್ದಿದ್ದೇವೆ.

ಕ. ಟ್ರಾ.

---

# ವಿಷಯಾನುಕ್ರಮಣಿಕೆಯು.

# ಛಂದಸ್ಸಾರ.

## ಪೀಠಿಕೆ.

೧. ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸಲಿಕ್ಕೆ ಬೇಕಾಗುವ ವೇಳೆಯ ಪರಿಮಾಣಕ್ಕೆ ಮಾತ್ರೆಯೆಂತಲೂ ಕಲೆಯೆಂತಲೂ ಹೆಸರುಂಟು.

೨. ಅಕ್ಷರಗಳ ಅಥವಾ ಮಾತ್ರೆಗಳ ಎಣಿಕೆಯ ನಿಯಮಗಳನ್ನು ಅನುಸರಿಸಿ ರಚಿಸಲ್ಪಟ್ಟ ವಾಕ್ಯಕ್ಕಾಗಲಿ ವಾಕ್ಯಮಾಲೆಗಾಗಲಿ ಪದ್ಯವೆನ್ನುತ್ತಾರೆ. ಪದ್ಯಕ್ಕೆ ವೃತ್ತ, ಕವನ, ಕವಿತ್ವ, ಕವಿತೆ ಮುಂತಾದ ಹೆಸರುಗಳುಂಟು.

೩. ಮಾತ್ರಾಗಣನೆಯಿಂದಲೂ ಅಕ್ಷರಗಣನೆಯಿಂದಲೂ ಪದ್ಯಗಳಲ್ಲಿ ಬೇರೆ ಬೇರೆ ವರ್ಗಗಳು ಮಾಡಲ್ಪಟ್ಟವೆ. ಆ ವರ್ಗಗಳಿಗೆ ಛಂದಸ್ಸುಗಳೆಂಬ ಹೆಸರು. ಪ್ರತಿಯೊಂದು ಛಂದಸ್ಸಿನಲ್ಲಿ ಎಷ್ಟೋ ಪದ್ಯಗಳಿರುತ್ತವೆ.

೪. ಈ ಗ್ರಂಥದಲ್ಲಿ ಸಂಸ್ಕೃತ ಕನ್ನಡ ನುಡಿಗಳ ಮುಖ್ಯ ಮುಖ್ಯ ಛಂದಸ್ಸುಗಳಲ್ಲಿರುವ ಪ್ರಸಿದ್ಧವೃತ್ತಗಳ ಲಕ್ಷಣಗಳನ್ನು ಹೇಳಿರುವದರಿಂದ ಇದಕ್ಕೆ 'ಛಂದಸ್ಸಾರ' ಎಂಬ ಹೆಸರು ಕೊಡಲ್ಪಟ್ಟದೆ.

---

# ಸಂಜ್ಞಾ ಪ್ರಕರಣ.

## ೧ನೆಯ ಸಂಧಿ. ಗುರುಲಘುವಿಚಾರ.

೫. ಛಂದಶ್ಶಾಸ್ತ್ರದಲ್ಲಿ ಹ್ರಸ್ವಾಕ್ಷರಕ್ಕೆ ಲಘುವೆಂತಲೂ ದೀರ್ಘಾಕ್ಷರಕ್ಕೆ ಗುರುವೆಂತಲೂ ಸಾಧಾರಣವಾಗಿ ಹೆಸರುಗಳಿವೆ. ಆದರೆ ಕೆಲವು ಕಾರಣಗಳಿಂದ ಲಘುವಿಗೆ ಗುರುತ್ವವು ಬರುತ್ತದೆ. ಅವು ಯಾವವೆಂದರೆ:—

(ಅ.) ಲಘುವಿನ ಮುಂದೆ ಅನುಸ್ವಾರ, ವಿಸರ್ಗ, ಸಂಯುಕ್ತಾಕ್ಷರ, ವ್ಯಂಜನ ಇವುಗಳಲ್ಲಿ ಯಾವದೊಂದು ಇದ್ದರೆ, ಆ ಲಘುವಿಗೆ ಗುರುತ್ವವು ಬರುತ್ತದೆ. ಉದಾಹರಣವು:

ಆರ್ಯಾ.

**ಅಂತಃಕರ್ಕಶರೆನಿಪರ್ |**
**ತಾಂ ತೋರ್ಪರ್ಮಂದಹಾಸದೊಳ್ಮುಸುಡಂ||**
**ಮುಂತಿನಿವಾತಂ ನುಡಿವರ್ |**
**ಪಿಂತನ್ಯರ ಘಾತಿಪರ್ಕಲಿಯ ಪಿರಿಯರ್.** || ೧ ||

ಈ ಪದ್ಯದಲ್ಲಿ ಮೊದಲನೆಯ ಚರಣದಲ್ಲಿ ಅನುಸ್ವಾರವು ಮುಂದಿರುವದರಿಂದ ಅಕಾರಕ್ಕೂ ವಿಸರ್ಗವು ಮುಂದಿರುವದರಿಂದ ತವರ್ಣಕ್ಕೂ ಸಂಯುಕ್ತಾಕ್ಷರವು ಮುಂದಿರುವದರಿಂದ ಕವರ್ಣಕ್ಕೂ ವ್ಯಂಜನವು ಮುಂದಿರುವದರಿಂದ ಪವರ್ಣಕ್ಕೂ ಗುರುತ್ವವು ಬಂದದೆ. ಇದರಂತೆ ಉಳಿದ ಮೂರು ಚರಣಗಳಲ್ಲಿ ಅನುಸ್ವಾರಸಂಯುಕ್ತವರ್ಣವ್ಯಂಜನಗಳು ಮುಂದಿರುವದರಿಂದ ಹಿಂದಿನ ಲಘುವರ್ಣಗಳಿಗೆ ಗುರುತ್ವ ಬಂದುದನ್ನೂ ನೋಡಿಕೊಳ್ಳಬಹುದು.

(೩.) ಪಾದಾಂತದಲ್ಲಿರುವ ಲಘುವರ್ಣವು ಅವಶ್ಯವಿದ್ದಲ್ಲಿ ಗುರುವಾಗುತ್ತದೆ. ಉದಾ:

ವಸಂತತಿಲಕಂ.

ಅಂತಬ್ಜಗಂಧವ ತರಂಗಗಳನ್ನು ದಾಂಟಿ |
ತುಂತುರ್ಗಳಂ ತಳೆದು ಬರ್ಪೆಲರಿಂದೆ ಬೀಸಿ ||
ಇಂತೊಯ್ಯನೊಯ್ಯನೆ ಶ್ರಮಂಗಳೆ ರಾಮಭದ್ರಂ |
ಸಂತಾಪದಿಂದಿರೆ ಸುಖಂಗುಡು ದೇವಿ ನೀನು. || ೨ ||

ಈ ಪದ್ಯದಲ್ಲಿ ಪ್ರಥಮ ಚರಣಾಂತದಲ್ಲಿರುವ 'ಟಿ' ವರ್ಣವು ಲಘುವಾದರೂ ಪಾದಾಂತದಲ್ಲಿ ಗುರುವು ಬೇಕಾಗಿರುವದರಿಂದ ಅದಕ್ಕೆ ಗುರುತ್ವವೊದಗುತ್ತದೆ. ಆದರಿಂದ ಅದನ್ನು 'ಟೀ' ಎಂದು ಉಚ್ಚರಿಸಬೇಕು. ಈ ನಿಯಮಕ್ಕೆ ತಕ್ಕ ಉದಾಹರಣಗಳು ಬಹುಶಃ ಸಂಸ್ಕೃತದಿಂದ ಕನ್ನಡದೊಳಗೆ ಬಂದ ನಾಲ್ಕು ಚರಣಗಳ ಅಕ್ಷರ ಗಣನೆಯ ಪದ್ಯಗಳಲ್ಲಿ ದೊರೆಯುವವು. ಕನ್ನಡದಲ್ಲಿ ಅಪರೂಪ. ಉದಾ:

ಚೌಪದಿ.

ಪ್ರಾಚೇತಸಾಖ್ಯಮುನಿಪತಿಯು ಬಲವಂದು |
ವಾಚಸ್ಪತಾಚಾರ್ಯನಡಿಗೆರಗಿ ನಿಂದು ||
ಗುರುಹಿರಿಯರಂಘ್ರಿಯಂ ನೆನೆದು ಮಾನಸದೆ |
ಧರೆಯ ಕವಿಗಳಿಗೆ ಕಯ್ಮುಗಿದು ಸಂತಸದೆ. || ೩ ||

ಈ ಪದ್ಯದ ಚರಣಾಂತವರ್ಣಗಳೆಲ್ಲ ಲಘುಗಳಿದ್ದರೂ ಪಾದಾಂತದಲ್ಲಿ ಗುರು ಬೇಕಾಗಿರುವದರಿಂದ ಅವಕ್ಕೆ ಗುರುತ್ವ ಬಂದದೆ.

ಹೀಗೆ ಯಾವ ಚರಣದ ಕಡೆಯ ಸ್ವರವನ್ನು ರಾಗದಿಂದ ಎಳೆದುಚ್ಚ
ರಿಸಬೇಕಾಗುವದೋ ಅಲ್ಲಿರುವ ಲಘುವಿಗೆ ಗುರುತ್ವ ಬರುತ್ತದೆ.
ಆದರೆ:

ವಾರ್ಧಿಕಷಟ್ಪದಿ.

**ಪಾವನತುಲಾಭರಣಮಂ ಮಾಡಿಕೊಂಡೆಸೆವ |**
**ಪಾವನತರಸ್ವರೂಪಂ ನಾರದಾದಿಮುನಿ- |**
**ಪಾವನತಪಾದಪಂಕೇರುಹದ್ವಂದ್ವನಿಂದುಕಲಾವತಂ**
**ಸನುಮೆಯ ||**
**ಭಾವನೆಯನೊಡಗೂಡಿಸುವ ಸಕಲಸುರರ ಸಂ- |**
**ಭಾವನೆಯ ಕಯ್ಕೊಂಬ ಲೋಕವಿಸ್ತರಣಪ್ರ- |**
**ಭಾವನಯನತ್ರಯಂ ದೇವಗಂಗಾಧರಂ ಸಲಹು**
**ಗೆಮ್ಮಂ ನಿಚ್ಚವೂ. || ೪ ||**

ಈ ಪದ್ಯದಲ್ಲಿ ೧ನೆಯ ೨ನೆಯ ೫ನೆಯ ಚರಣಗಳ ಕಡೆ
ಯಲ್ಲಿ ಲಘುವರ್ಣಗಳಿವೆ; ಆದರೆ ಅವಕ್ಕೆ ಗುರುತ್ವವು ಬರುವ
ದಿಲ್ಲ. ಏಕೆಂದರೆ, ವಾರ್ಧಿಕದ ಪಾದಕ್ಕೆ ಬೇಕಾದ ೨೦ ಮಾತ್ರೆ
ಗಳೆಲ್ಲ ಸಂಪೂರ್ಣವಾಗಿರುತ್ತವೆ. ಅವು ಗುರುಗಳಾದರೆ ೧ ಮಾತ್ರೆ
ಹೆಚ್ಚಾಗುತ್ತದೆ.

(ಉ.) ಪದ್ಯದ ಕಡೆಯ ಲಘುವಿಗೂ ಪದ್ಯಾರ್ಧದ ಕಡೆಯ
ಲಘುವಿಗೂ ನಿತ್ಯವಾಗಿ ಗುರುತ್ವವು ಬರುತ್ತದೆ. ಏಕೆಂದರೆ ಆ
ಸ್ಥಳಗಳಲ್ಲಿ ಸ್ವರವನ್ನು ಎಳೆದು ರಾಗವನ್ನು ಮಾಡಬೇಕಾಗುತ್ತದೆ.
ಉದಾಹರಣ:—

ಮೇಲಿನ ೨ನೆಯ ಪದ್ಯದಲ್ಲಿ ೨ನೆಯ ೪ನೆಯ ಚರಣಗಳಲ್ಲಿ
ರುವ 'ಸಿ' 'ಸು' ವರ್ಣಗಳು ಲಘುಗಳಾಗಿದ್ದರೂ ಕವಿತಾರ್ಧದ

ಕಡೆಗೂ ಪೂರ್ಣ ಕವಿತೆಯ ಕಡೆಗೂ ಇರುವದರಿಂದ ಅವಕ್ಕೆ ಗುರುತ್ವವು ಬರುವ ಕಾರಣ ಅವನ್ನು 'ಸೀ' 'ನೂ' ಎಂದುಚ್ಚರಿಸ ಬೇಕು.

೮ನೆಯ ಪದ್ಯದ ೩ನೆಯ ಚರಣದ ಕಡೆಯಲ್ಲಿರುವ 'ಯ' ವರ್ಣವಾದರೂ ಪದ್ಯಾರ್ಧದ ಕಡೆಗಿರುವ ಕಾರಣ ಗುರುವಾಗು ತ್ತದೆ. ಅದರಿಂದ ಅದನ್ನು 'ಯಾ' ಅಂತ ಎಳೆದು ಅನ್ನಬೇಕು. ಆದರೆ ಈ ನಿಯಮುಗಳಿಗೆ ಕೆಲವು ಅಪವಾದಗಳುಂಟು. ಅವು ಯಾವವೆಂದರೆ:—

೧. ಸಂಸ್ಕೃತ ಸಂಯುಕ್ತಾಕ್ಷರಗಳು ಮುಂದೆ ಬಂದರೂ ಕನ್ನಡ ಲಘುವರ್ಣಗಳಿಗೆ ಗುರುತ್ವವು ಬರಲಾರದು. ಉದಾಹರಣ:—

ಮೇಲೆ ಬರೆದ "ಅಂತಬ್ಜಗಂಧವ" ಎಂಬ ಪದ್ಯದಲ್ಲಿ 'ಶ್ರ' ಈ ಸಂಯುಕ್ತಾಕ್ಷರವು ಸಂಸ್ಕೃತ ಶಬ್ದದ ಆದಿಗೆ ಇರುವದರಿಂದ ಅದರ ಹಿಂದಿನ 'ನೆ' ಎಂಬ (ಕನ್ನಡ ಶಬ್ದದ ಕಡೆಯ) ಲಘು ವರ್ಣಕ್ಕೆ ಗುರುತ್ವವಿಲ್ಲ. ಕಾರಣ 'ಶ್ರ'ವರ್ಣವನ್ನು ಸಯಿಲಾಗಿ ಅಂದರೆ ಶವರ್ಣದಂತೆ ಉಚ್ಚರಿಸಬೇಕು. ಇದೇ ಪ್ರಕಾರ ಮುಂದೆ ಶಾಂತಪ್ರಾಸಕ್ಕೆ ಉದಾಹರಣವಾಗಿ ಹೇಳಿದ "ಸಿಂಧುರನಗರದಿಂದ" ಎಂಬ ಪದ್ಯದಲ್ಲಿ 'ದ್ವಾ' ಎಂಬ ಸಂಯುಕ್ತಾಕ್ಷರದ ಹಿಂದಿನ 'ವ' ವರ್ಣಕ್ಕೂ ಗುರುತ್ವ ಬರುವದಿಲ್ಲ. ಏಕಂದರೆ 'ದ್ವಾ' ಎಂಬದು ಸಂಸ್ಕೃತ ಸಂಯುಕ್ತಾಕ್ಷರವು.

## ಶಿಥಿಲಸಂಯುಕ್ತಾಕ್ಷರಗಳು.

೨. ರ, ಳಕಾರಾಂತ ಕನ್ನಡ ಶಬ್ದಗಳಿಗೆ ಗ, ದ, ವ, ಜಕಾ ರಾದಿಗಳಾದ ಶಬ್ದಗಳಾಗಲಿ ಪ್ರತ್ಯಯಗಳಾಗಲಿ ಪರವಾಗಿ ಒತ್ತ ಕ್ಷರಗಳಾಗಿದ್ದರೆ, ಅವನ್ನು ಕವಿತಾನಿಯಮಕ್ಕೆ ಅನುಕೂಲವಾಗು ವಂತೆ ಒತ್ತಿ ಅಥವಾ ಸೈಲಾಗಿ ಉಚ್ಚರಿಸುವ ರೂಢಿಯು ಗ್ರಂಥ ಗಳಿಂದ ತಿಳಿಯುತ್ತದೆ. ಅದರಿಂದ ಇಂಥ ಸಂಯುಕ್ತಾಕ್ಷರಗಳ

ಹಿಂದಿನ ಲಘುವರ್ಣಗಳಿಗೆ ಅವಶ್ಯವಿಲ್ಲದಲ್ಲಿ ಗುರುತ್ವವು ಬರುವದಿಲ್ಲ*. ಇಂಥ ಸಂಯುಕ್ತಾಕ್ಷರಗಳಿಗೆ ಶಿಥಿಲಸಂಯುಕ್ತಾಕ್ಷರಗಳೆನ್ನುವರು.

ಉದಾಹರಣಗಳು:

ಕಳಕಂಠಂಗಳ ಬಗ್ಗಣೆ |
ಗಿಳಿಗಳ ಚಪ್ಪರಣೆಯಳಿಗಳಿಂಚರಮೆಸೆಗುಂ ||
ತಳಿರ್ಗಳ್ ತನಿವಣ್ಗಳ್ ಸುಮ- |
ಕುಳಂಗಳಡಿಕಿರಿದ ಚೂತಶಾಖಾಂತರದೊಳ್. || ೧ ||

ಪನ್ನೆರಡು ದಿನದೊಳಟ್ಟರ್ |
ಸನ್ನುತಸುಕುಮಾರಕಂಗೆ ಮಣಿದೊಟ್ಟಿಲನೆ- ||
ತ್ತಂ ನೆಗಳ್ದಿರೆ ವಾದ್ಯರವಂ |
ಕನ್ನೆಯರಿರದೆಯ್ದೆ ಮಾಡಿದರ್ ಮಂಗಳಮಂ. || ೨ ||

---

*ಇದಕ್ಕೆ ಆಧಾರವಾಗಿರುವ ಶ- ದ- ಸೂತ್ರಗಳು.

ಕೆಲವು ನಿಜಬಿಂದುಗಳ್, ಕೆಲ- |
ಕೆಲವು ವಿಕಲ್ಪಾರ್ಥ ಬಿಂದುಗಳ್, ದ್ವಿತ್ವಂಗಳ್ ||
ಕೆಲವಾ ಶಿಥಿಲ ದ್ವಿತ್ವಂ |
ಕೆಲವುಭಯಮುಮಾಗಿ ಕೆಲವು ಪದನರಿವುದವಂ. || ೭೬ ||

ಗದವಜಕಾರಮವಿವಿರರೆ |
ಪದಮುಧ್ಯಂ ವಿಷಯಮಾಗನೇಕಾಕ್ಷರದೊಳ್ ||
ಪುದಿಯೆ ಲಘೂಪಧೆಕೆಲಕೆಲ- |
ವೊದವಿರ್ಕುಂ ರಾಂತಳಾಂತಮವು ಶಿಥಿಲತೆಯಂ. || ೪೬ ||

ಪುಗೆದದಪವಕಾರಂ ವಿಧಿ- |
ಯುಗೆಕಾರಂ ವರ್ತಮಾನಕಾಲದ ಗುಂ ಧಾ- ||
ತುಗೆ ರಳಕುಳ ರೇಫಾಂತ |
ಕ್ಕೊಗೆಗುಂ ಶಿಥಿಲತ್ವಮಗುರು ಪೂರ್ವ ಸ್ಥಿತಿಯಿಂ. || ೫೫ ||

ಅರುವರಿವರಳಲುತಿರ್ಪರ್ ।
ಕೆರಳ್ವಂ ಪರಸಂಪದಂಗಳಿಂ ಬಾಳ್ವಂ ॥
ಕರುಣಾಳುವಸಂತುಷ್ಟಂ ।
ನಿರುತಂ ಸಂಶಯಪರಂ ಕ್ಷಮಾಹೀನಂ. ॥ ೩ ॥

ನಲವೇರ್ಚುವ ಪೆಣ್ಗಳ ಕರ- ।
ತಳದಿಂ ಕರತಳಕೆ ಬರ್ಪ ಬಾಲಕನಾಗಳ್ ॥
ಗೆಲೆವಂದಂ ಕೆಂದಾವರೆ- ।
ಯಲರಿಂದಲರ್ಗೆಯ್ದೆ ತಳರ್ವ ಹಂಸಾರ್ಭಕನಂ. ॥ ೪ ॥

ಎಂತಾನುಂ ನಿಜರೂಪಮು ।
ಸಂತಮಿಡುತ್ತಲ್ಲಿ ವಿಪ್ರನತಿಧೀರತೆಯುಂ ॥
ಮುಂತಿಟ್ಟು ಗಿರಿಜೆಯೊಡನುಸು- ।
ರ್ದಂ ತಡಬಡಿಸುತ್ತೆ ಮಿಸುಪ ಪೊಸಪುಸಿವಾತಂ. ॥ ೫ ॥

ಅಲರ್ಜೊಂಪಂ ಕಾತೊರಗುವ ।
ಫಲಾಳಿ ತಳ್ತರೆ ರಸಾಲಭೂರುಹಮೆಸೆಗುಂ. ॥ ೬ ॥

ಈ ಮೇಲೆ ತೋರಿಸಿದ ಪದ್ಯಗಳಲ್ಲಿರುವ ಸಂಯುಕ್ತಾಕ್ಷರಗಳನ್ನು ಶಿಥಿಲವಾಗಿ ಉಚ್ಚರಿಸಿದ್ದರಿಂದ ಇವೆಲ್ಲ ಶಿಥಿಲಸಂಯುಕ್ತಾಕ್ಷರಗಳು. ಕಾರಣ ಇವುಗಳ ಹಿಂದಿರುವ ಲಘುವರ್ಣಗಳಿಗೆ ಗುರುತ್ವವಿಲ್ಲ.

ಇನ್ನು ಜಯಮಿನಿಯೊಳಗಿನ ಪದ್ಯಗಳು —
(ಸಂ. ೮, ಪದ್ಯ ೩.)

ಮಿರುಗುವ ತಳಿರ್ದೋರಣಂಗಳಂ ಕಟ್ಟಿಸುತೆ ।
ಮರಿಗೋಗಿಲೆಗಳ ಬಾಯ್ಗಳ ಬಲಿದ ಬಂಧನದ ।
ಸೆರೆಗಳಂ ಬಿಡಿಸುತ್ತ ತುಂಬಿಗಳ ಬಳಗಕ್ಕೆ ಕಮಲಮಂ
ಸೂರೆಗುಡುತ. ॥ ೧ ॥

ಇತ್ತಂಡಮುಂ ವ್ಯಾಪ್ರದೊಡನಿಳೆಗುರುಳ್ದಿರುದ- ।
ವೃತ್ತದಿಂದುಭಯಜನಮೇಕಾರ್ಥಕೆಳಸಿದೊಡೆ ।
ಮತ್ತೆ ಲೇಸಾದಪುದೆ ಜಗದೊಳೀಮೂವರುಪಹತಿ-
ಚಿತ್ರಮಲ್ಲೆಂದನು. ॥ ೨ ॥

ಅರಳಿರ್ದ ಶೋಣಾಬ್ಜಗಳ ಛಾಯೆಯುಡರ್ದುದೆನೆ ।
ಭರದಿಂದ ಕತ್ತಲೆಯ ಮೇಲೆ ಬಹ ರವಿಯ ರಥ- ।
ತುರಗಖುರಪುಟದಿಂದಲೇಳ್ವಕೆಂಧೂಳ್ಗಳೆನೆಪ್ರಾಚೀನಿತಂ-
ಬವತಿಯು ॥

ಸರಸದಿಂ ತರಣಿಯನಿದಿರ್ಗೊಳಲ್ಕೆಂದೆತ್ತಿ ।
ಧರಿಸಿರ್ದ ಮೆರೆವ ಕದಲಾರತಿಯೊ ಎನಲು ವಿ- ।
ಸ್ತರದ ಸಂಧ್ಯಾರಾಗಮೆಯ್ದೆ ರಂಜಿಸುತಿರ್ದುದಂದು
ಮೂಡಣ ದೆಸೆಯೊಳು. ॥ ೩ ॥

ಇವುಗಳಲ್ಲಿ ೧ನೆಯ ೨ನೆಯ ಪದ್ಯಗಳಲ್ಲ *ಈ ಚಿಹ್ನದಿಂದ ತೋರಿಸಿದ ಒತ್ತಕ್ಷರಗಳಿಗೆ ಶಿಥಿಲೋಚ್ಚಾರವಿಲ್ಲದ್ದರಿಂದ ಅವುಗಳ ಹಿಂದಿನ ಲಘುವರ್ಣಗಳಿಗೆ ಗುರುತ್ವವುಂಟು. ೩ನೆಯ ಪದ್ಯದಲ್ಲಿ

ತೋರಿಸಿದ ಮೊದಲನೆಯ ಸಂಯುಕ್ತಾಕ್ಷರಕ್ಕೆ ಶಿಥಿಲೋಚ್ಚಾರ ವಿರುವದರಿಂದ ಅದರ ಹಿಂದಿನ ಲಘುವರ್ಣಕ್ಕೆ ಗುರುತ್ವವಿಲ್ಲ. ೨ನೆಯ ಸಂಯುಕ್ತಾಕ್ಷರವು ಒತ್ತಿ ಉಚ್ಚರಿಸಲ್ಪಟ್ಟಿರುವ ಕಾರಣ ಅದರ ಹಿಂದಿನ ಲಘುವರ್ಣಕ್ಕೆ ಗುರುತ್ವವುಂಟು.

೩. ಕರ್ದುಂಕು, ಎರ್ದೆ, ಆದಿರ್ಮುತ್ತೆ, ಬರ್ದಿಲ, ಅಮರ್ದು ಮುಂತಾದ ಕೆಲವು ಶಬ್ದಗಳಲ್ಲಿರುವ ಸಂಯುಕ್ತಾಕ್ಷರಗಳಿಗೆ ಸಹಜ ಶಿಥಿಲತ್ವವಿರುವ ಕಾರಣ ಅವುಗಳ ಹಿಂದಿನ ಲಘುವರ್ಣಗಳಿಗೆ ಗುರುತ್ವವಿಲ್ಲ. ಉದಾಹರಣಗಳು:

ಶಬ್ದಮಣಿದರ್ಪಣ.

॥ ಕಂದ ॥

ಬರ್ದಿಲಂ ಸಗ್ಗಕ್ಕೆ ಪೆಸರ್ ।
ಗರ್ದುಗೆಯುಮರ್ದುವಳ್ಳಿಮತ್ತೆಕಂಪಲರ್ದುದೆನಲ್ ॥
ಎರ್ದೆವಾಯುದಿರ್ಮುತ್ತೆಪೊದ- ।
ಳ್ದಿರ್ದೆಯೆಂಬಿವು ಸಹಜಶಿಥಿಲವೃತ್ತಿಯನಾಳ್ಗುಂ. ॥ ೧ ॥

ರಾಜಶೇಖರ.

ಸವಿನಗೆಯೆಂಬಮರ್ದಿನ ಸೊನೆ ।
ಕವಿತ್ರರ್ಪವೊಲಾಗೆ ಸುರಿವಲಾಲಾಜಲಮು- ॥
ಣ್ಮಿವ ಪೊಳೆವಲ್ ಮಿನುಗುತ್ತಿರೆ ।
ಕುವರಂ ಕುಳ್ಳಿರ್ದು ಜನನಿಯೊಳ್ ಬಿನದಿಸುವಂ. ॥ ೨ ॥

ಉಳಿದ ಶಬ್ದಗಳಿಗೆ ಉದಾಹರಣಗಳನ್ನು ಗ್ರಂಥಗಳಲ್ಲಿ ನೋಡಿ ಕೊಳ್ಳಿರಿ.

ಲಿಂಗವಂಶ ಜೈನ ಕವಿಗಳು ರಚಿಸಿದ ಹಳಗನ್ನಡ ಗ್ರಂಥ ಗಳಲ್ಲಿ ಮೇಲೆ ವಿವರಿಸಿದ ಸಂಯುಕ್ತಾಕ್ಷರಗಳನ್ನೆಲ್ಲ ಬಹುಶಃ ಶಿಥಿಲ ವಾಗೇ ಉಚ್ಚರಿಸಿದ್ದರಿಂದ ಅವುಗಳ ಹಿಂದಿನ ಲಘುವರ್ಣಗಳಿಗೆ ಗುರುತ್ವವು ಬಂದಿಲ್ಲ. ಏಕಂದರೆ ಬ್ರಾಹ್ಮಣೇತರ ಜಾತಿಯ ಜನರು ಸ್ವಾಭಾವಿಕವಾಗಿ ಸಂಯುಕ್ತಾಕ್ಷರಗಳನ್ನು ಶಿಥಿಲವಾಗಿಯೇ ಉಚ್ಚ ರಿಸುತ್ತಾರೆ.

ಬ್ರಾಹ್ಮಣ ಕವಿಗಳು ಇಂಥ ಸಂಯುಕ್ತಾಕ್ಷರಗಳನ್ನು ಬೇಕಾ ದಾಗ ಒತ್ತಿ, ಬೇಕಾದಾಗ ಸೈಲಾಗಿ ಉಚ್ಚಾರ ಮಾಡಿದುದರಿಂದ ಅವುಗಳ ಹಿಂದಿನ ಲಘುವರ್ಣಗಳಿಗೆ ಗುರುತ್ವ ಲಘುತ್ವಗಳೆರಡನ್ನೂ ಇಟ್ಟಿದ್ದಾರೆಂಬದು ಪ್ರಯೋಗಗಳಿಂದ ತಿಳಿಯುತ್ತದೆ.

೬. ಒಂದು ಲಘುವರ್ಣವನ್ನು ಉಚ್ಚರಿಸಲಿಕ್ಕೆ ಬೇಕಾಗುವ ವೇಳೆಗೆ ಒಂದು ಮಾತ್ರೆಯನ್ನುತ್ತಾರೆ. ಕಾರಣ, ಒಂದು ಲಘು ವರ್ಣಕ್ಕೆ ಒಂದು ಮಾತ್ರೆಯು, ಗುರುವರ್ಣದ ಉಚ್ಚಾರಕ್ಕೆ ಲಘು ವರ್ಣದ ಇಮ್ಮಡಿ ವೇಳೆ ಬೇಕಾಗುವದರಿಂದ ಗುರುವರ್ಣಕ್ಕೆ ಎರಡು ಮಾತ್ರೆಗಳು, ಹೀಗೆ ಛಂದಃಶಾಸ್ತ್ರಜ್ಞರು ಪದ್ಯಗಳಲ್ಲಿ ಮಾತ್ರೆ ಗಳನ್ನು ಎಣಿಸುತ್ತಾರೆ.

೭. ಪದ್ಯಲಕ್ಷಣಗಳನ್ನು ಹೇಳಲಿಕ್ಕೆ ಅನುಕೂಲವಾಗಬೇ ಕೆಂದು, ಲಘು ಗುರು ವರ್ಣಗಳಿಗೆ ಕ್ರಮದಿಂದ **ಲ**, **ಗ** ಎಂಬ ಸಂಕ್ಷಿಪ್ತಸಂಜ್ಞೆಗಳನ್ನು ಕೊಟ್ಟದ್ದಲ್ಲದೆ, ಲಘುವನ್ನು ತೋರಿಸಲಿಕ್ಕೆ ᴗ ಈ ಅರ್ಧಚಂದ್ರಚಿಹ್ನವನ್ನೂ ಗುರುವನ್ನು ತೋರಿಸಲಿಕ್ಕೆ — ಈ ಸಣ್ಣ ಸರಳರೇಖಾಚಿಹ್ನವನ್ನೂ ಗೊತ್ತುಮಾಡಿದ್ದಾರೆ. ಅದರಿಂದ ᴗ ಈ ಚಿಹ್ನವು ಒಂದು ಮಾತ್ರೆಯನ್ನೂ — ಇದು ಎರಡು ಮಾತ್ರೆ ಗಳನ್ನೂ ತೋರಿಸುತ್ತದೆ.

೮. ಪೂರಾ ಪದ್ಯದಲ್ಲಿ ಅಥವಾ ಅದರ ಕೆಲವೊಂದು ಭಾಗ ದಲ್ಲಿ ಇರುವ ಗುರು ಲಘು ವರ್ಣಗಳನ್ನು ಅವುಗಳ ಚಿಹ್ನಗಳಿಂದ

ಒರೆದು ತೋರಿಸುವದೇ ಪ್ರಸ್ತಾರವೆನಿಸುತ್ತದೆ. ಉದಾಹರಣ: "ತ್ರಿಚ್ಛಿನ್ನಂ ಮನಜರಗಂ ಪ್ರಹರ್ಷಿಣೀಕಂ |" ಇದರ ಪ್ರಸ್ತಾರವು:

| — — — | ⏑ ⏑ ⏑ | ⏑ — ⏑ | — ⏑ — | —.

---

## ೨ನೆಯ ಸಂಧಿ. ಗಣವಿಚಾರವು.

೯. ಪದ್ಯಲಕ್ಷಣಗಳನ್ನು ಹೇಳಲಿಕ್ಕೆ ಅನುಕೂಲವಾಗಬೇಕೆಂದು ಎರಡು ಇಲ್ಲವೆ ಮೂರು ಅಥವಾ ನಾಲ್ಕು ಅಥವಾ ಐದು ಅಕ್ಷರಗಳ ಸಾಲಿಗೆ ಗಣವೆಂಬ ಹೆಸರನ್ನು ಇಟ್ಟಿದ್ದಾರೆ.

೧೦. ಗಣಗಳಲ್ಲಿ ಅಕ್ಷರಗಣಗಳು, ಮಾತ್ರಾಗಣಗಳು ಎಂದು ಎರಡು ಭೇದಗಳಿವೆ. ಮೂರು ಅಕ್ಷರಗಳಿಂದ ಒಂದು ಅಕ್ಷರ ಗಣವಾಗುತ್ತದೆ. ಆದರೆ ಮಾತ್ರಾಗಣಗಳಲ್ಲಿ ಎರಡರಿಂದ ಐದರ ವರೆಗೆ ಅಕ್ಷರಗಳಿರುತ್ತವೆ.

---

### ಅಕ್ಷರಗಣಗಳು.

೧೧. ಮ, ಯ, ರ, ಸ, ತ, ಜ, ಭ, ನ ಗಳೆಂದು ಅಕ್ಷರ ಗಣಗಳು ಎಂಟು ಅವೆ. ನಾವು ಮುಂದೆ ಪದ್ಯಲಕ್ಷಣಗಳನ್ನು ಹೇಳಲಿಕ್ಕೆ ಇವೇ ಎಂಟು ಗಣಸಂಜ್ಞಾಕ್ಷರಗಳನ್ನೂ ಲ, ಗ, ಲಘು ಗುರು ಎಂಬ ಸಂಜ್ಞೆಗಳನ್ನೂ ಉಪಯೋಗಿಸಿರುತ್ತೇವೆ. ಮತ್ತು ಇವುಗಳಿಗೆ ಅಕಾರಾಂತ ನಪುಂಸಕಲಿಂಗದ ಹಳಗನ್ನಡ ಪ್ರತ್ಯಯಗಳನ್ನು ಬಹುಶಃ ಹಚ್ಚಿದ್ದೇವೆ.

---

### ಗಣಗಳ ಲಕ್ಷಣಗಳು.

| ಅನ್ವರ್ಥಕನಾಮ. | ಅರ್ಥ. | ಗಣಾಕ್ಷರ. | ಉದಾಹರಣ. | ಪ್ರಸ್ತಾರ. |
|---|---|---|---|---|
| ತ್ರಿಗುರು. | ಮೂರು ಗುರು ಇದ್ದರೆ, | ಮ ಗಣವು. | ಶ್ರೀಕಾಂತಂ. | \|— — —\| |
| ಆದಿಲಂ. | ಆದ್ಯಕ್ಷರ ಲಘು " | ಯ " | ಕಬಂಧಂ. | \|⏑ — —\| |
| ಮಧ್ಯಲಂ. | ಮಧ್ಯ ವರ್ಣ ಲಘು " | ರ " | ಪಾವಕಂ. | \|— ⏑ —\| |
| ಅಂತ್ಯಗಂ. | ಅಂತ್ಯ ವರ್ಣ ಗುರು " | ಸ " | ಪವನಂ. | \|⏑ ⏑ —\| |
| ಅಂತ್ಯಲಂ. | ಅಂತ್ಯ ವರ್ಣ ಲಘು " | ತ " | ಆಕಾಶ. | \|— — ⏑\| |
| ಮಧ್ಯಗಂ. | ಮಧ್ಯ ವರ್ಣ ಗುರು " | ಜ " | ವಿಸೇಶ. | \|⏑ — ⏑\| |
| ಆದಿಗಂ. | ಆದಿ ವರ್ಣ ಗುರು " | ಭ " | ಚಂದ್ರಮ. | \|— ⏑ ⏑\| |
| ತ್ರಿಲಘು. | ಮೂರು ಲಘು " | ನ " | ತ್ರಿದಿವ. | \|⏑ ⏑ ⏑\| |

ಈ ಎಂಟು ಗಣಗಳಿಗೆ ಎಂಟು ದೇವತೆಗಳೂ ಫಲಗಳೂ ಅವೆ. ಆದರೆ ಅವುಗಳ ಉಪಯೋಗವು ಪದ್ಯಲಕ್ಷಣಗಳನ್ನು ಹೇಳುವಾಗ ವಿಶೇಷವಾಗಿ ತೋರುವದಿಲ್ಲ. ಆದರೂ ಕೆಳಗಿನ ಒಂದು ವೃತ್ತದಲ್ಲಿ ದೇವತೆಗಳು, ಫಲಗಳು ಮುಂತಾದ ಗಣಗಳ ಸಂಪೂರ್ಣ ಲಕ್ಷಣ ಗಳು ಹೇಳಲ್ಪಟ್ಟವೆ.

ಗಣಶ್ಲೋಕವು. ಮಹಾಸ್ರಗ್ಧರಾ ವೃತ್ತಂ. ||

ಸಿರಿಯಂ ಮಂ ಗತ್ರಯಂ ಬೀರುವದು ಮಹಿ,
ಜಲಂ ಬುದ್ಧಿಯಂ ವಕ್ತ್ರಲಂ ಯಂ |
ಮರಗೂಳಂ ಕೇಡ ರಂ ಮಧ್ಯಲಘು,
ಕಡೆಯುಗಂ ಗಾಳಿ ಸಂಚಾರಮಂ ಸಂ ||
ಇರೆ ಲಾಂತಂ ತಂ ಧನಕ್ಷಾಮವ ಗಗನ
ಮಿನಂ ರೋಗಮಂ ಮಧ್ಯಗಂ ಜಂ |
ಹರಿಣಾಂಕಂ ಗಾದಿ ಭಂ ಕೀರ್ತಿಯು,
ಸುರಪುರಿಯಾಯುಷ್ಯಮಂ ಲತ್ರಯಂ ನಂ. || ೧ ||

### ಮಾತ್ರಾಗಣಗಳು.

೧೨. ಮಾತ್ರಾಗಣಗಳಿಗೆ ಅಕ್ಷರಗಣನೆ ಇಲ್ಲ, ಆದರೆ ಮಾತ್ರಾ ಗಣನೆಯುಂಟು. ಅವು ಮೂರು ಪ್ರಕಾರವಾಗಿವೆ.

೧ನೆಯ ಪ್ರಕಾರದ ಗಣಗಳಿಗೆ ಮೂರು ಮಾತ್ರೆಗಳು. ಅವಕ್ಕೆ ಎರಡಾಗಲಿ ಮೂರಾಗಲಿ ಅಕ್ಷರಗಳಿರುತ್ತವೆ. ಅವು ಮೂರು, ಯಾವವೆಂದರೆ: | ⏑⏑⏑ | —⏑ | ⏑— |. ಇವಕ್ಕೆ ಉದಾಹರಣ ಗಳು:—ಗಗನ, ಮಾಲೆ, ಕರಂ ಮುಂತಾದವು.

೨ನೆಯ ಪ್ರಕಾರದ ಗಣಗಳಿಗೆ ನಾಲ್ಕು ಮಾತ್ರೆಗಳಿರುತ್ತವೆ. ಅವಕ್ಕೆ ಎರಡರಿಂದ ನಾಲ್ಕರ ವರೆಗೆ ಅಕ್ಷರಗಳಿರುತ್ತವೆ. ಅವು ಐದು, ಯಾವವೆಂದರೆ: | — — | ⏑⏑— | ⏑—⏑ | —⏑⏑ | ⏑⏑⏑⏑ |. ಇವಕ್ಕೆ ಉದಾಹರಣಗಳು:—ಮಾರಂ, ಪವನಂ, ದಿನೇಶ, ಚಂದ್ರಮ, ಸುರಪುರಿ ಮುಂತಾದವು.

೩ನೆಯ ಪ್ರಕಾರದ ಗಣಗಳಿಗೆ ಐದು ಮಾತ್ರೆಗಳಿರುತ್ತವೆ. ಅವಕ್ಕೆ ಮೂರರಿಂದ ಐದರ ವರೆಗೆ ಅಕ್ಷರಗಳಿರುತ್ತವೆ. ಅವು ಎಂಟು, ಯಾವವೆಂದರೆ: | ⏑ — — | — ⏑ — | — — ⏑ | — ⏑ ⏑ ⏑ | ⏑ — ⏑ ⏑ | ⏑ ⏑ — ⏑ | ⏑ ⏑ ⏑ — | ⏑ ⏑ ⏑ ⏑ ⏑ | ಇವಕ್ಕೆ ಉದಾಹರಣಗಳು:— ಕಬಂಧಂ, ಪಾವಕಂ, ಆಕಾಶ, ಚಂದ್ರಮನು, ದಿನೇಶನು, ಪವಮಾನ, ಸುರಪುರಂ, ತ್ರಿದಿವಪತಿ ಮುಂತಾದವು.

ಈ ಮಾತ್ರಾಗಣಗಳು ಆರ್ಯಾ, ಕಂದ, ರಗಳೆ, ಷಟ್ಪದಿ ಮುಂತಾದ ಮಾತ್ರಾವೃತ್ತಗಳಲ್ಲಿ ಬೇಕಾಗುತ್ತವೆ. ಅಕ್ಷರಗಣ ಗಳೊಳಗಿನ ಕೆಲವು ಗಣಗಳು ಇಲ್ಲಿ ಬಂದವೆ. ಕಾರಣ ಅವೇ ಹೆಸರು ಗಳು ಇವಕ್ಕೆ ಬರುತ್ತವೆಂದು ತಿಳಿಯಬೇಕು. ಆದರೆ ಇಲ್ಲಿ ಸಗಣವೆಂದರೆ ⏑ ⏑ ⏑ ⏑ ಇದನ್ನು ತಿಳಿಯಬೇಕು.

---

## ೩ನೆಯ ಸಂಧಿ. ಪ್ರಾಸವಿಚಾರ.

ಸ್ತ್ರೀಯರನ್ನು ನತ್ತು, ಬುಗಡೆ, ಓಲೆ, ಸರಿಗೆ ಮುಂತಾದ ಅನೇಕಾಲಂಕಾರಗಳಿಂದ ಶೃಂಗರಿಸುವಂತೆ ಕವಿತಾರೂಪಸ್ತ್ರೀಯನ್ನು ಮನೋಹರವಾದ ಅರ್ಥಗಳಿಂದಲೂ ಶಬ್ದಗಳಿಂದಲೂ ಕವಿಗಳು ಅಲಂಕರಿಸುತ್ತಾರೆ.

ರಮ್ಯವಾದ ಅರ್ಥಗಳಿಗೆ ಅರ್ಥಾಲಂಕಾರಗಳೆಂತಲೂ ಶಬ್ದಗಳಿಗೆ ಶಬ್ದಾಲಂಕಾರಗಳು ಅಥವಾ ಪ್ರಾಸಗಳೆಂತಲೂ ಹೆಸರುಗಳುಂಟು.

ಅರ್ಥಾಲಂಕಾರಗಳು ಸ್ತ್ರೀಯರಲ್ಲಿ ಸ್ವಭಾವಸಿದ್ಧವಾಗಿರುವ ಸೌಂದರ್ಯ, ಚಾತುರ್ಯ, ಮಾಧುರ್ಯಾದಿ ಸುಗುಣಗಳಿಗೆ ಸರಿಯಾಗಿವೆ. ಶಬ್ದಾಲಂಕಾರಗಳು ನತ್ತು, ಬುಗಡೆ ಮುಂತಾದ ಬಾಹ್ಯಾಲಂಕಾರಗಳಿಗೆ ಸರಿಯಾಗಿವೆ.

ಇದರ ಮೇಲಿಂದ ಸುಗುಣಗಳಿಲ್ಲದ ಹೆಂಗಸಿಗೆ ಬಾಹ್ಯಾಲಂಕಾರಗಳಿಂದ ಹೇಗೆ ಚಂದವಿರುವದಿಲ್ಲೋ ಹಾಗೆ ಒಳ್ಳೇ ಅರ್ಥವಿಲ್ಲದ ಪದ್ಯಕ್ಕೆ ಶಬ್ದಾಲಂಕಾರಗಳಿಂದ ಮಹತ್ವವು ಬರುವದಿಲ್ಲ. ಆದರೂ ಪೂರ್ವದ ಕನ್ನಡ ಕವಿಗಳು ಶಬ್ದಾಲಂಕಾರವೆಂದರೆ ಪ್ರಾಸವು ಕವಿತೆಯ ಮುಖ್ಯ ಲಕ್ಷಣವೆಂದೆಣಿಸಿ, ಪ್ರಾಸವಿಲ್ಲದೆ ಕವಿತೆಗಳನ್ನು ರಚಿಸಬಾರದೆಂದು ನಿರ್ಬಂಧ ಮಾಡಿರುತ್ತಾರೆ. ಇದರಿಂದ ಕನ್ನಡ ಪದ್ಯಗಳನ್ನು ರಚಿಸುವದು ಬಿಗಿಯಾಗಿದೆ, ಯತಿಯ ಕಟ್ಟಳೆಯು ನಿಲ್ಲುವದಿಲ್ಲ. ಸಂಸ್ಕೃತ ಪದ್ಯಗಳ ಸವಿಯು ಬಹುಶಃ ಕನ್ನಡ ಕವಿತೆಯಲ್ಲಿ ಇರುವದಿಲ್ಲ.

ಈಗ ಅರ್ಥಾಲಂಕಾರವನ್ನು ಹೇಳುವದು ನಮ್ಮ ಉದ್ದೇಶವಲ್ಲ; ಕಾರಣ ಶಬ್ದಾಲಂಕಾರವೆಂದರೆ ಪ್ರಾಸವನ್ನು ಇಲ್ಲಿ ಹೇಳುತ್ತೇವೆ.

೧೩. ಕವಿತೆಯಲ್ಲಿ ಎರಡು, ಮೂರು, ನಾಲ್ಕು, ಇಲ್ಲವೆ ಆರು ಭಾಗಗಳನ್ನು ಮಾಡಿ, ಒಂದೊಂದಕ್ಕೆ ಅಡಿ, ಚರಣ, ಪಾದ

ಪದ ಮುಂತಾದ ಹೆಸರುಗಳನ್ನಿಟ್ಟಿದ್ದಾರೆ. ಮೊದಲಿನ ಪಾದದ ಮೊದಲಕ್ಷರವು ಗುರುವಾದರೆ, ಎಲ್ಲಾ ಚರಣಗಳ ಆದ್ಯಕ್ಷರಗಳು ಗುರುಗಳಾಗಿರಬೇಕು, ಲಘುವಾದರೆ ಲಘುಗಳಾಗೇ ಇರಬೇಕು*.

೧೪. ಪ್ರಥಮ ಚರಣದ ಎರಡನೆಯ ವರ್ಣವು ಯಾವದಿದ್ದರೂ ಚಿಂತೆ ಇಲ್ಲ. ಆದರೆ ಮುಂದಿನ ಎಲ್ಲಾ ಚರಣಗಳ ಎರಡನೆಯ ಅಕ್ಷರಗಳು ಮೊದಲಿನ ಚರಣದ ಎರಡನೆಯ ಅಕ್ಷರದ ಬಳ್ಳಿಯೊಳಗಿನವೇ ಇರಬೇಕು. ಇವಕ್ಕೆ **ಪ್ರಾಸಾಕ್ಷರ**ಗಳೆಂಬ ಹೆಸರು. ಇದೇ ಕನ್ನಡ ಕವಿತೆಯ ಮುಖ್ಯ ಪ್ರಾಸವು. ಮುಂದೆ ನಾವು ಹೇಳುವ ಯಾವ ಪ್ರಾಸವನ್ನಾದರೂ ಕವಿತೆಯಲ್ಲಿ ಇಡುವದು ಕವಿಗಳ ಇಚ್ಛಾಧೀನವಾಗಿದೆ. ಆದರೆ ಈ ಪ್ರಾಸವು ಹಾಗಲ್ಲ, ಇದನ್ನು ಬಿಟ್ಟು ಕವಿತೆಯನ್ನು ರಚಿಸಬಾರದು.

೧೫. ಮುಖ್ಯ ಪ್ರಾಸದಲ್ಲಿ ಸಿಂಹ, ಗಜ, ವೃಷಭ, ಅಶ್ವ, ಶರಭ, ಅಜ ಪ್ರಾಸಗಳೆಂದು ಆರು ಭೇದಗಳುಂಟು. ಇವುಗಳ ಲಕ್ಷಣವನ್ನು ಹೇಳುವ ಕವಿತೆಯು—

ಕಂದವು.

**ನಿಜದಿಂ ಬಂದೊಡೆ ಸಿಂಹಂ, |**
**ಗಜ ದೀರ್ಘಂ, ಬಿಂದು ವೃಷಭ, ವ್ಯಂಜನ ಶರಭಂ ||**
**ಅಜಂ ವಿಸರ್ಗಂ, ಹಯಮಂ- |**
**ಬುಜಮುಖಿ! ದಡ್ಡಕ್ಕರಂಗಳವು ಷಟ್‍ಪ್ರಾಸಂ. || ೨ ||**

**ಅರ್ಥ:**— ಪ್ರಾಸಾಕ್ಷರಗಳೆಲ್ಲ ನಿಜದಿಂ (ಹ್ರಸ್ವವಾಗಿ) ಬಂದರೆ ಸಿಂಹಪ್ರಾಸವು, ದೀರ್ಘಗಳಾಗಿದ್ದರೆ ಗಜಪ್ರಾಸವು, ಅನುಸ್ವಾರದಿಂದ ಕೂಡಿದ್ದರೆ ವೃಷಭಪ್ರಾಸವು, ವ್ಯಂಜನಗಳಾದರೆ ಶರಭ

---

* ಈ ನಿಯಮವು ಸಂಸ್ಕೃತ ಭಾಷೆಯ ಕವಿತೆಗಳಿಗೆ ಹತ್ತುವದಿಲ್ಲ. ಮತ್ತು ಅಂಥಾ ಕನ್ನಡ ಕವಿತೆಗಳಿಗೂ ಹತ್ತುವದಿಲ್ಲ.

ಪ್ರಾಸವು, ವಿಸರ್ಗದಿಂದ ಕೂಡಿದರೆ ಅಜಪ್ರಾಸವು, ದ್ವಿತ್ವಾಕ್ಷರಗಳಾದರೆ ಅಶ್ವಪ್ರಾಸವು ಆಗುತ್ತವೆ.

ಈ ಪ್ರಾಸಗಳ ವಿಷಯಕ್ಕೆ ಮೇಲಿನ ಒಂದು ಕಂದ ಮಾತ್ರ ದೊರೆಯುತ್ತದೆ. ಅದೂ ಸಂದಿಗ್ಧಪದಗಳುಳ್ಳದ್ದಾಗಿದೆ. ಇದರಿಂದ ಅನೇಕರು ಅನೇಕಾರ್ಥಗಳನ್ನು ಮಾಡಿಕೊಂಡರೆ ಆಶ್ಚರ್ಯವಲ್ಲ.

(ಇದರಂತೇ ಮುಂದೆ ಬರುವ ೬ ಉಪಪ್ರಾಸಗಳನ್ನು ಹೇಳುವ ಕವಿತೆಗಳಾದರೂ ಸಂದಿಗ್ಧವಾಗಿವೆ; ಕಾರಣ ಅವನ್ನು ಇಲ್ಲಿ ಹೇಳುವದಿಲ್ಲ.)

ಸಿಂಹಪ್ರಾಸದ ಉದಾಹರಣ:— ಕಂದ. (ಗಿರಿಜಾಕಲ್ಯಾಣ.)

**ಎಳೆವೆಳದಿಂಗಳ ಸೊಂಕಿಂ ।**
**ಗಳವಡಲಳ್ಕುವಶಿರೀಷಸುಕುಮಾರಾಂಗಂ ॥**
**ಬಳವತ್ಕರ್ಕಶತರದಿಂ ।**
**ಬಳಸಿದ್ದೀನಾರಸೀರೆಯಾಂತುದು ಚಿತ್ರಂ. ॥ ೧ ॥**

ಗಜಪ್ರಾಸಕ್ಕೆ:— ವಸಂತತಿಲಕಾವೃತ್ತಂ. (ಹಿಮವರ್ಣನೆ.)

**ವಾರಾಶಿ ಶಯ್ಯೆ, ಜಲಜಾಲಯೆ ಭಾರ್ಯೆಯೆಂದಾ ।**
**ನಾರಾಯಣಂ ತಪನಮಂಡಲವಾಸಿಯಾದಂ ॥**
**ಜಾರಾಂಗನಾಂಗಪರಿರಂಭಕನಾದನೈ! ಕ- ।**
**ಸ್ತೂರೀಲಲಾಟನುರಿನುಂಗಿದನೀಹಿಮಕ್ಕೆ. ॥ ೧ ॥**

ವೃಷಭಪ್ರಾಸಕ್ಕೆ:— ಕಂದಂ. (ರಾಜಶೇಖರ ೧೦ ಆ.)

**ಆನಂದನಮಂ ವಿಜಿತಮ- ।**
**ಹಾನಂದನಮಂ ನಿಜಾಂತರಾಳಸ್ಥಿತ ಲೋ- ॥**
**ಕಾನಂದನಮಂ ತೋಷಿತ- ।**
**ಮಾನಂದನಮಂ ನಿರೀಕ್ಷಿಸಲ್ಕಡೆ ನೃಪತೀ. ॥ ೧ ॥**

*ಶರಭಪ್ರಾಸಕ್ಕೆ:— ವಾರ್ಧಿಕ. (ಜೈಮಿನಿ.)

ತಣ್ಗದಿರನನ್ವಯದ ಪಾರ್ಥನ ತುರಂಗಮದು |
ಪೆಣ್ಗುದುರೆಯಾಗಿ ಪೆರ್ಬುಲಿಯಾಗಿ ಪಳಯುಂತೆ |
ಕಣ್ಗೊಳಸುತಮಲಾಶ್ವಮಾಗಿಯಾಶ್ಚರ್ಯದಿಂ
ಸ್ತ್ರೀರಾಜ್ಯಮಂ ಪೊಕ್ಕುದು. ||

ಅಜಪ್ರಾಸವು ವಿಸರ್ಗದಿಂದಾಗುತ್ತದೆ. ಕನ್ನಡದಲ್ಲಿ ವಿಸರ್ಗ ಪ್ರಾಸವನ್ನಿಡುವದು ಅಸಂಭಾವ್ಯವಾಗಿದೆ. ಕಾರಣ ಉದಾಹರಣ ಬೇಡ.

ಅಶ್ವಪ್ರಾಸಕ್ಕೆ:— ಕಂದ. (ಗಿರಿಜಾಕಲ್ಯಾಣ.)

ಎತ್ತಣ ಹರನೆತ್ತಣ ತಪ- |
ಮೆತ್ತಣ ತಾರಕನ ಬಾಧೆಯೆತ್ತಣ ಬಿಸುಗಣ್ ||
ಎತ್ತಣುರಿಯೆತ್ತಣೀಯಿರ- |
ವೆತ್ತಣ ಕೋಟಲೆಯುನೆನಗೆ ಮಾಡಿದೆ ಮದನಾ. || ೧ |

ಉಪಪ್ರಾಸಗಳು.

೧೬. ಮೇಲೆ ವಿವರಿಸಿದ ಪ್ರಾಸಗಳಲ್ಲದೆ ವಿನುತ, ಶಾಂತ, ವರ್ಗ, ಸಮೀಪ, ಅನುಗತ, ಅಂತ್ಯ ಪ್ರಾಸಗಳೆಂದು ೬ ಉಪಪ್ರಾಸಗಳುಂಟು. ಇವುಗಳ ವಿವರವು:—

೧. ಪ್ರಾಸಾಕ್ಷರಗಳಲ್ಲಿ ಕ್ರಮದಿಂದ ಹ್ರಸ್ವ-ದೀರ್ಘ-ರೂಪ ಸಂಬಂಧವಿದ್ದರೆ, ವಿನುತಪ್ರಾಸವಾಗುತ್ತದೆ.

ಉದಾಹರಣವು (ಮುಂದೆ ಜಗತೀಛಂದಸ್ಸಿನ ವಂಶಸ್ಥವೃತ್ತದ ಉದಾಹರಣಪದ್ಯವು ೨೧೪).

* ಸಂಯುಕ್ತಾಕ್ಷರವು ಪ್ರಾಸಸ್ಥಾನದಲ್ಲಿ ಬಂದರೆ ಶರಭಪ್ರಾಸವಾಯಿತು.

೨. ಪ್ರಾಸಸ್ಥಾನದಲ್ಲಿ ಬಂದ ಶಬ್ದವೇ ಬಂದಂತೆ ಇದ್ದು, ಅದರ ಪದಚ್ಛೇದವೂ ಅರ್ಥವೂ ಬೇರೆಬೇರೆಯಾಗುತ್ತಿದ್ದರೆ, ಶಾಂತಪ್ರಾಸವಾಗುತ್ತದೆ. ಉದಾಹರಣ:—

(ಜೈಮಿನಿ — ವಾರ್ಧಿಕ.)

**ಸಿಂಧುರನಗರದಿಂದ ನಡೆತಂದು ಪವನಜಂ ।**
**ಸಿಂಧುರಂಗದೊಳೆಸೆವ ದ್ವಾರಕೆಯೊಳೈದೆ ಮುಳಿ- ।**
**ಸಿಂ, ಧುರದೊಳಸುರರಂ ಗೆಲ್ದವನನಾರೋಗಣೆಯ**
**ಸಮಯದೊಳ್ ಕಂಡನು. ॥**

ಇಲ್ಲಿ "ಸಿಂಧುರ" ಶಬ್ದವು ಪ್ರಾಸಸ್ಥಾನದಲ್ಲಿ ಬಂದದೆ. ಮತ್ತು ಅದರ ಪದಚ್ಛೇದವೂ ಅರ್ಥವೂ ಬೇರೆಬೇರೆಯಾಗಿವೆ. ಪದಚ್ಛೇದವು: ಸಿಂಧುರ, ಸಿಂಧು-ರಂಗ, ಮುಳಿಸಿಂ ಧುರದೊಳ್.

೩. ವರ್ಗಾಕ್ಷರಗಳು ಪ್ರಾಸಸ್ಥಾನದಲ್ಲ ಅನುಕ್ರಮವಾಗಿ ಬಂದರೆ, *ವರ್ಗಪ್ರಾಸವಾಗುತ್ತದೆ. ಉದಾಹರಣ:—

ಕಂದವು.

**ಸಕಲಜನವಿನುತನಂ ಶತ- ।**
**ಮಖಸದೃಶ-ವಿಶಾಲ-ವಿವಿಧ-ವಿಭವೋದಯನಂ ॥**
**ಸುಗುಣಗಣಯುತನನರಿಬಲ ।**
**ವಿಘಾಟನನಂ ಕಂಡನಣುಗನಂ ರಾಘವನಂ. ॥ ೧ ॥**

೪. ಶ, ಷ, ಸ ವರ್ಣಗಳು ಕ್ರಮದಿಂದ ಪ್ರಾಸಸ್ಥಾನದಲ್ಲಿ ಬಂದರೆ, ಸವಿಸಾಪಪ್ರಾಸವಾಗುತ್ತದೆ*. ಉದಾಹರಣ:—

* ಇದು ಮುಖ್ಯ ಪ್ರಾಸಕ್ಕೆ ಅಪವಾದವು.

ಕಂದಂ.

ಶಶಧರಬಿಂಬಾನನೆಯಂ |
ಝಷಕೇತನ ಮಾತೆಯುಂ ಸರೋಜಾಂಬಕಿಯಂ ||
ಬಿಸವಿಶದವರ್ಣೆಯುಂ ಕಂ- |
ಡೊಸೆದಂ ಬನದೊಳಗೆ ಜನಕತನುಜೆಯನನಘಂ. || ೧ ||

೫. ಪದ್ಯಗಳಲ್ಲಿ ಒಮ್ಮೆ ಬಂದ ಶಬ್ದವಾಗಲಿ ಅಕ್ಷರಗಳಾಗಲಿ ಮೇಲಿಂದ ಮೇಲೆ ಪುನರುಕ್ತಿದೋಷವಾಗದಂತೆ ಬರುತ್ತಿದ್ದರೆ, ಅನುಗತಪ್ರಾಸ ಅಥವಾ ಅನುಪ್ರಾಸ ಅಥವಾ ಯಮಕವಾಗುತ್ತದೆ. ಉದಾಹರಣ:—

ವಿಬುಧಪ್ರಿಯಾವೃತ್ತಂ. (ರಾಜಶೇಖರ.)

ಸಾರಸಾರಸಮಾನಲೋಚನಕಾಂತಿ ಕಾಂತಿಯುತಾನನೆ |
ಭೂರಿ-ಭೂರಿಪುಸಂಘಸಂಹೃತಿಶಕ್ತಿಶಕ್ತಿಸಮನ್ವಿತೇ ||
ಮಾರ-ಮಾರಣದಕ್ಷದಕ್ಷಮದಾಪಹಾಂಕವಿರಾಜಿತೇ |
ಧೀರಧೀರತಿಪಾಲಪಾಲನಶೀಲೆ ಪಾಲಿಪುದಂಬಿಕೇ. || ೧ ||

ಮತ್ತೇಭವೃತ್ತ.

ನಳಿನಂ ಕುಂದೆ, ವಿಕಾಸಮೊಂದೆ ಕುಮುದಂ, ಸೊಂಪಿಂದೆ ಚಂದ್ರೋಪಲಂ |
ಜಳಮಂ ಬೀರೆ, ಪಯೋಧಿ ಮೀರೆ, ವಿರಹಿವ್ರಾತಕ್ಕೆ ಕಾಯ್ಪೇರೆ, ಕೋ- ||
ಮಳೆಯರ್ ಪಾಡೆ, ಚಕೋರಿ ನೋಡೆ, ಮದನಂ ಪಂಚಾಸ್ತ್ರಮಂ ಪೂಡೆ, ಚಾ- |

ಪಳೆಯರ್ ಜೋಡೆಯರೋಡೆ, ಮೂಡಿದುದು
ತೇಜೋಮಂದಿರಂ ಚಂದಿರಂ. ॥ ೨ ॥

೬. ಪದ್ಯಾರ್ಧದ ಅಥವಾ ಪೂರ್ಣ ಪದ್ಯದ ಚರಣಗಳ ಕಡೆಯಲ್ಲಿ ಬಂದ ವರ್ಣಗಳೇ ಬಂದಿದ್ದರೆ, ಅಂತ್ಯಪ್ರಾಸವಾಗುತ್ತದೆ. ಉದಾಹರಣ:—

ಇಂದ್ರವಜ್ರಾವೃತ್ತಂ.

ನಿನ್ನಂಘ್ರಿ ಪಂಕೇರುಹರೇಣು ಸೋಂಕಲ್ ।
ಮುನ್ನಾಯ್ತು ಕನ್ಯಾಮಣಿಯಾಕ್ಷಣಂ ಕಲ್ ॥
ಇನ್ನೊಂದರಂಗುಷ್ಠನಖಾಗ್ರವೊತ್ತಲ್ ।
ಸನ್ನುತ್ಯೆ ಮಂದಾಕಿನಿ ಬಂದಳತ್ತಲ್. ॥ ೨ ॥

೧೭. ಮುಖ್ಯ ಪ್ರಾಸಗಳಿಗೆ ಫಲವನ್ನು ಹೇಳಿರುತ್ತಾರೆ:— ಸಿಂಹಪ್ರಾಸದಿಂದ ಅತಿವಿಭವವು, ಗಜದಿಂದ ರಾಜ್ಯಲಾಭವು, ವೃಷಭದಿಂದ ಸಂಪದವು, ಶರಭದಿಂದ ಸಿರಿಯು, ಅಶ್ವದಿಂದ ಜಯವು. ಈ ಅರ್ಥದ ಪದ್ಯವು:—

ಕಂದವು.

ಸಿಂಗನೊಳತಿವಿಭವಂ ಮಾ- ।
ತಂಗನೊಳಂ ರಾಜ್ಯಲಾಭ ಸಂಪದ ವೃಷನಿಂ- ॥
ಭಂಗಮದಜನಿಂದಕ್ಕುಂ, ।
ತುಂಗಸ್ತನೆ ಶರಭದಿಂದ ಸಿರಿ ತುರಗ ಜಯಂ. ॥ ೧ ॥

## ೪ನೆಯ ಸಂಧಿ. ಯತಿವಿಚಾರವು.

೧೮. ಪದ್ಯಗಳನ್ನು ಒಂದೇ ಉಸುರಿನಿಂದ ಅನ್ನುವದು ಅಸಾಧ್ಯವಾದ ಕಾರಣ ನಡುವೆ ಸ್ವರವನ್ನು ನಿಲ್ಲಿಸಬೇಕಾಗುತ್ತದೆ. ಈ ಸ್ವರ ನಿಲ್ಲಿಸೋಣಕ್ಕೆ ಯತಿ ಎನ್ನುತ್ತಾರೆ. ಸಣ್ಣ ದೊಡ್ಡ ಚರಣಗಳ ಕಡೆಯಲ್ಲಿಯೂ ದೊಡ್ಡ ಚರಣಗಳ ಮಧ್ಯದಲ್ಲಿಯೂ ಯತಿಗಳಿರುತ್ತವೆ.

ಯತಿ ಇದ್ದಲ್ಲಿ ವ್ಯಕ್ತವಾಗಿರಲಿ ಅವ್ಯಕ್ತವಾಗಿರಲಿ ವಿಭಕ್ತಿಯು ಇರಬೇಕು. ಅಂದರೆ ಪದ್ಯವು ಸುಬೋಧವಾಗಬೇಕಾದರೆ, ಯಾವದೊಂದು ವಿಭಕ್ತಿ ಪೂರ್ಣವಾದ ಮೇಲೆ ಯತಿ ಇರಬೇಕು. ಛಂದಃಶಾಸ್ತ್ರದ ಕಟ್ಟಳೆಯಾದರೂ ಹೀಗೇ ಅದೆ; ಆದರೆ ಕನ್ನಡ ಕವಿತೆಯಲ್ಲಿ ಪ್ರಾಸವೇ ಮುಖ್ಯವೆಂದು ಪ್ರಾಸದ ತ್ರಾಸದಿಂದ (ಒಬ್ಬ ಸರ್ವಜ್ಞ ಕವಿಯನ್ನುಳಿದು) ಕನ್ನಡ ಕವಿಗಳು ಯತಿಯ ಕಟ್ಟಳೆಯನ್ನು ಮುರಿದುಬಿಟ್ಟಿದ್ದಾರೆ. ಆದರೂ ಒಂದೇ ಉಸುರಿನಿಂದ ಕಡೆತನಕ ಪದ್ಯವನ್ನು ಅನ್ನುವದು ಅಸಾಧ್ಯವು. ಅದರಿಂದ ಇಷ್ಟನೆಯ ವರ್ಣದ ಕಡೆಯಲ್ಲಿ ಯತಿಯುಂಟೆಂದು ಹೇಳಿದರೆ, ಕವಿತಾಪಾಠಕರಿಗೆ ಸ್ವರ ನಿಲ್ಲಿಸುವದಕ್ಕೂ ಧಾಟಿಯಿಂದ ಪದ್ಯವನ್ನು ಅನ್ನಲಿಕ್ಕೂ ಅನುಕೂಲವಾಗುತ್ತದೆ. ಆದಕಾರಣ ಇಲ್ಲಿ ಯತಿಯ ನಿಯಮಗಳು ಅವಶ್ಯವಾಗಿ ಬೇಕು.

ಇನ್ನು ಮೇಲೆ ಹೊಸ ಕವಿತೆಗಳನ್ನು ಮಾಡುವವರು ಅವಶ್ಯವಾಗಿ ಯತಿಯ ನಿಯಮವನ್ನು ಅನುಸರಿಸಬೇಕು. ಅದರಿಂದ ಅವರಿಗೆ ಹಿಂದಿನ ಕವಿಗಳಿಗಿಂತ ಮಿಗಿಲಾದ ಯಶಸ್ಸು ಬರಬಹುದು. ಹಿಂದಿನ ಕವಿಗಳಲ್ಲಿ ಒಬ್ಬ ಸರ್ವಜ್ಞಕವಿ ಮಾತ್ರ ಯತಿಯ ನಿಯಮವನ್ನು ಪಾಲಿಸಿದ್ದಾನೆ.

೧೯. ಈ ಗ್ರಂಥದಲ್ಲಿ ಮುಂದೆ ಕವಿತಾಲಕ್ಷಣಗಳನ್ನು ಹೇಳುವಾಗ ಯತಿಗೆ ವಿಶ್ರಮಣ, ವಿಶ್ರಾಮ, ವಿರಾಮ, ವಿರತಿ,

ವಿಶ್ರಾಂತಿ, ಉಪರಮ, ಛೇದ, ಚ್ಯುತಿ, ನಿಲ್ಕೆ, ಭಿನ್ನ ಮುಂತಾದ ಪರ್ಯಾಯನಾಮಗಳನ್ನು ಕೊಟ್ಟಿದ್ದೇವೆ.

೨೦. ಮತ್ತು ಸಂಖ್ಯಾವಾಚಕಗಳಿಗೆ ಬದಲಾಗಿ ಸಮಗೆ ಅನುಕೂಲವಾದಂತೆ ಕೆಳಗಿನ ಸಂಜ್ಞೆಗಳನ್ನು ಉಪಯೋಗಿಸಿರುತ್ತೇವೆ.

ಮೂರಕ್ಕೆ ತ್ರಿಕ. ನಾಲ್ಕಕ್ಕೆ ವೇದಪರ್ಯಾಯಗಳೂ ಸಮುದ್ರ ಪರ್ಯಾಯಗಳೂ. ಐದಕ್ಕೆ ಬಾಣಪರ್ಯಾಯ, ಮಾರಶರ ಪರ್ಯಾಯ, ಭೂತ. ಆರಕ್ಕೆ ಶಾಸ್ತ್ರ, ಋತುಪರ್ಯಾಯ. ಏಳಕ್ಕೆ ಶೈಲಪರ್ಯಾಯ, ಹಯಪರ್ಯಾಯ, ಮುನಿಪರ್ಯಾಯ. ಎಂಟಕ್ಕೆ ದಿಶಾ ವಸು ಕರಿಪರ್ಯಾಯಗಳು. ಒಂಬತ್ತಕ್ಕೆ ರಂಧ್ರ. ಹನ್ನೊಂದಕ್ಕೆ ರುದ್ರಪರ್ಯಾಯ. ಹನ್ನೆರಡಕ್ಕೆ ಸೂರ್ಯಪರ್ಯಾಯ. ಹದಿಮೂರಕ್ಕೆ ಹಸ್ತ, ಮುಂತಾದವು.

೨೧. ಒಂದೇ ಚರಣದಲ್ಲಿ ಒಂದಕ್ಕಿಂತ ಹೆಚ್ಚು ಸ್ಥಳಗಳಲ್ಲಿ ಯತಿಯು ಹೇಳಲ್ಪಟ್ಟಿದ್ದರೆ, ಪ್ರಥಮ ಯತಿಯನ್ನು ಚರಣಪ್ರಾರಂಭ ದಿಂದ ಎಣಿಸಿ, ಬಳಿಕ ಎರಡನೆಯ ಯತಿಯನ್ನು ಎಣಿಸಬೇಕಾದರೆ, ಮೊದಲಿನ ಯತಿಯ ಮುಂದಿನ ವರ್ಣವನ್ನು ಮೊದಲು ಮಾಡಬೇಕು. ಉದಾಹರಣವು:

**ಮಂದಾಕ್ರಾಂತಂ ಮಭನತತಗಂಗಂ ಚತುಃಷಡ್ವಿ-**
**ರಾಮಂ. ||**

ಈ ಮಂದಾಕ್ರಾಂತಾವೃತ್ತದಲ್ಲಿ ನಾಲ್ಕನೆಯ ಅಕ್ಷರಕ್ಕೆ ಮೊದಲಿನ ಯತಿಯದೆ. ಬಳಿಕ ಎರಡನೆಯ ಯತಿಯು ೬ನೆಯ ಅಕ್ಷರಕ್ಕೆ ಅದೆ. ಅಂದರೆ ೫ನೆಯ ಅಕ್ಷರವನ್ನು ಎಣಿಸುವಾಗ ಮೊದಲು ಮಾಡಬೇಕು. ಅದು ಚರಣದ ಹತ್ತನೆಯ ಅಕ್ಷರಕ್ಕೆ ಬರುತ್ತದೆ. ಇದೇ ಪ್ರಕಾರ ಎಲ್ಲಾ ಕಡೆಯಲ್ಲಿಯೂ ತಿಳಿಯಬೇಕು.

೨೨. ಯತಿಯನ್ನು ಪಾಲಿಸಿದ ಉದಾಹರಣಗಳು:

ಶಾರ್ದೂಲವಿಕ್ರೀಡಿತ.

ಲೇಸ್ಸೈ ಪೆಣ್ಣೊಡಗೂಟಮಂ ಬಿಡುವುದುಂ ಪೆಣ್ಮಕ್ಕಳು ತೃಪ್ತಿಯುಂ ।
ಲೇಸ್ಸೈ ಪೆಂಡತಿ ಬಂಜೆಯಪ್ಪುದು ಬಸುರ್ ಕೇಡಾಗಿಯುಂ ಪೋಪುದು, ॥
ಲೇಸ್ಸೈ ಜನ್ಮಿಸಿದಾಗಲೇ ಮಡಿವುದುಂ ಸಲ್ಲಪ್ಪುದೆಂತಾದೊಡೇಂ ।
ಲೇಸಲ್ಲಂ ಧನರೂಪಶಕ್ತಿಯುತನುಂ ವಿದ್ಯಾವಿಹೀನಂ ಸುತಂ. ॥ ೧ ॥

ಮತ್ತೇಭವಿಕ್ರೀಡಿತಂ.

ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಂಗಳಿಂ ಕೇಳುತ, ।
ಕೆಲವಂ ಮಾಳ್ಪವರಿಂದ ಕಂಡು, ಕೆಲವಂ ಸುಜ್ಞಾನದಿಂ ನೋಡುತ, ॥
ಕೆಲವಂ ಸಜ್ಜನಸಂಗದಿಂದಲರಿಯಲ್ ಸರ್ವಜ್ಞನಪ್ಪಂತೆ ಕೇಳ್ ।
ಪಲವುಂ ಪಳ್ಳ ಸಮುದ್ರವೈ, ಹರಹರಾಶ್ರೀಚನ್ನಸೋಮೇಶ್ವರಾ. ॥ ೨ ॥

ಮೇಲೆ ತೋರಿಸಿದ ಉದಾಹರಣಗಳಲ್ಲಿ ಛಂದಸ್ಸಿನ ನಿಯಮಗಳಿಗನುಸಾರವಾಗಿ ೧ನೆಯ ಪದ್ಯದಲ್ಲಿ ಪ್ರತಿ ಚರಣದ ೧೨ನೆಯಕ್ಷರದ ಮುಂದೆ, ೨ನೆಯ ಪದ್ಯದಲ್ಲಿ ಪ್ರತಿ ಚರಣದ ೧೩ನೆಯಕ್ಷರದ ಮುಂದೆ ವ್ಯಕ್ತವಿಭಕ್ತಿಯಲ್ಲಿ ಯತಿ ಇರುತ್ತದೆ. ವಿಭಕ್ತಿಪ್ರತ್ಯಯವು ಶಬ್ದದ ಕಡೆಯಲ್ಲಿ ಪ್ರತ್ಯಕ್ಷವಾಗಿ ತೋರಿದರೆ, ಅದು ವ್ಯಕ್ತವಿಭಕ್ತಿಯೆನಿಸುತ್ತದೆ.

ಆರ್ಯಾವೃತ್ತಂ.

ಮಂದಾಕಿನಿಯಸೊರೆಯೆನಲ್ ।
ಚಂದ್ರನ ಕಲೆಯಾವನುತ್ತಮಾಂಗದೊಳು ॥
ಸಂದಪುದಾಶಿವನಂಘ್ರಿ- ।
ದ್ವಂದ್ವಂ ಸತ್ಕಾರ್ಯಸಿದ್ಧಿಯಂ ಮಾಳ್ಕೆ. ॥ ೩ ॥

ಮಾಲಿನೀವೃತ್ತಂ.

ಸರಿಸರಿಯೆನಲಿರ್ಪಾಲ್ ಗೆಯ್ದು ಸಾಮ್ರಾಜ್ಯವನ್ನಾ ।
ನರವರರುಭಯರ್ಕಳ್ ಭೂಪ ನಿನ್ನಾಜ್ಞೆಯಿಂದ ॥
ಧರಿಸಿ ಶಮಿತವೈರರ್ ಪಾಲಿಪರ್ ಚಾಲಕಾಜ್ಞಾ- ।
ಸರಣಿಯೊಳೆ ತೆರಳ್ವಾಸ್ಯಂದನಾಶ್ವಂಗಳಂತೇ. ॥ ೪ ॥

ಮೇಲೆ ಬರೆದ ೩ನೆಯ ಪದ್ಯದ ೨ನೆಯ ಚರಣದ ಕಡೆಯಲ್ಲಿ ಅವ್ಯಕ್ತವಿಭಕ್ತಿಯಲ್ಲಿ ಯತಿ ಇರುತ್ತದೆ. ಮತ್ತು ೪ನೆಯ ಪದ್ಯದಲ್ಲಿ ಪ್ರಥಮಚರಣದ ಎಂಟನೆಯಕ್ಷರದ ಮುಂದೆಯೂ ಕಡೆಯಲ್ಲಿಯೂ ತೃತೀಯ ಚರಣದ ಕಡೆಯಲ್ಲಿಯೂ ಅವ್ಯಕ್ತವಿಭಕ್ತಿಗೆ ಯತಿಯಾಗಿರುತ್ತದೆ. ಉಳಿದೆಡೆಗಳಲ್ಲೆಲ್ಲ ವ್ಯಕ್ತವಿಭಕ್ತಿಗಳಿಗೆ ಯತಿಯಾಗಿದೆ. ಅವ್ಯಕ್ತವಿಭಕ್ತಿಯೆಂದರೆ ಸಮಾಸಪದಗಳ ಮುಂದಿನ ವಿಭಕ್ತಿಪ್ರತ್ಯಯಗಳು ಲುಪ್ತವಾಗಿ ಮೂಲಶಬ್ದಗಳೇ ಉಳಿದಿರುತ್ತವೆ. ಅಲ್ಲಿ ಅವ್ಯಕ್ತವಿಭಕ್ತಿಯುಂಟೆನ್ನುತ್ತಾರೆ. ಅದು ಹೇಗೆಂದರೆ: ಮೇಲಿನ ಎರಡು ಪದ್ಯಗಳಲ್ಲಿ 'ಅಂಘ್ರಿದ್ವಂದ್ವಂ', 'ಇರ್ಪಾಲ್ ಗೆಯ್ದು', 'ಆನರವರರು', 'ಆಜ್ಞಾಸರಣಿ' ಎಂಬಲ್ಲಿ 'ಅಂಘ್ರಿ', 'ಇರ್ಪಾಲ್', 'ಆ', 'ಆಜ್ಞಾ' ಎಂಬ ನಾಲ್ಕು ಶಬ್ದಗಳ ಕಡೆಯಲ್ಲಿ ಅವ್ಯಕ್ತವಿಭಕ್ತಿಯುಂಟು. ಅಲ್ಲೇ ಯತಿಯೂ ಆದೆ. 'ಅಂಘ್ರಿ' ಎಂಬಲ್ಲಿ 'ಗಳ' ಎಂಬ ಷಷ್ಠೀವಿಭಕ್ತಿಯೂ 'ಇರ್ಪಾಲ್' ಎಂಬಲ್ಲಿ 'ಗಳಂ'

ಎಂಬ ದ್ವಿತೀಯಾವಿಭಕ್ತಿಯೂ ಆ ಎಂಬಲ್ಲಿ ವರ' ಎಂಬ ಪ್ರಥಮಾ ವಿಭಕ್ತಿಯೂ ಅಜ್ಞಾ ಎಂಬಲ್ಲಿ ಯ ಎಂಬ ಷಷ್ಠೀವಿಭಕ್ತಿಯೂ ಲೋಪವನ್ನು ಹೊಂದಿರುತ್ತವೆ. ಆದರಿಂದ ಈ ಶಬ್ದಗಳಂತ್ಯದಲ್ಲಿ ಅವ್ಯಕ್ತವಿಭಕ್ತಿಗಳುಂಟೆನ್ನಬೇಕು.

ಆದರೆ ಕವಿತೆಯು ಪೂರ್ವಾರ್ಧದ ಕೊನೆಯಲ್ಲಿ ಅವ್ಯಕ್ತವಿಭಕ್ತಿಯನ್ನಿಡಕೂಡದು; ಇಟ್ಟರೆ, ಯತಿಭಂಗದೋಷವಾಗುತ್ತದೆ. ಮೇಲೆ ಹೇಳಿದ ನಾಲ್ಕೂ ಪದ್ಯಗಳ ಪೂರ್ವಾರ್ಧದ ಕೊನೆಯಲ್ಲಿ ನೋಡಿರಿ, ವ್ಯಕ್ತವಾದ ವಿಭಕ್ತಿಗಳೇ ಇರುತ್ತವೆ. ಇಂಥಲ್ಲಿ ಅವ್ಯಕ್ತವಿಭಕ್ತಿ ಬಂದು ಯತಿಭಂಗವಾದುದಕ್ಕೆ ಉದಾಹರಣವು:—

**ಮಣಿಯದ ಸಿಂಹಳನಗ್ಗದ |**
**ಮಣಿಯಂ ಮಣಿದಿತ್ತುಮಾತ್ಮಭವೆಯೆನಿಸುವ ಪೆಣ್- ||**
**ಮಣಿಯಂ ನೃಪಕುಲಚೂಡಾ- |**
**ಮಣಿಯುವರಾಜಂಗೆ ಮದುವೆಯಂ ಮಾಡಿದಪಂ. || ೫ ||**

ಈ ಕಂದದ ಪೂರ್ವಾರ್ಧದ ಕೊನೆಯಲ್ಲಿ 'ಪೆಣ್' ಎಂಬ ಶಬ್ದವುಂಟು. ಅಲ್ಲಿ 'ಗಳೊಳ್' ಎಂಬ ಸಪ್ತಮೀವಿಭಕ್ತಿಯು ಲೋಪವಾಗಿದೆ. ಆದರಿಂದ ಅಲ್ಲಿ ಅವ್ಯಕ್ತವಿಭಕ್ತಿಗೆ ಯತಿ ನಿಂತುದರಿಂದ ಯತಿಭಂಗವಾಯಿತು.

**ಯತಿಯ ಸಂಬಂಧದ ಸಂಧಿವಿಚಾರವು.**—ಯತಿಯ ಹಿಂದಿನ ಪದದ ಅಂತ್ಯಾಕ್ಷರವು ಯತಿಯ ಮುಂದಿನ ಪದದ ಆದ್ಯಕ್ಷರದಲ್ಲಿ ಕೂಡಿ ಸಂಧಿಯಾದರೂ, ಯತಿಭಂಗವಾಗುವದಿಲ್ಲ; ಅಂದರೆ ಹೊಸ ಚರಣದ ಅಥವಾ ಹೊಸ ಯತಿಯ ಆರಂಭದಲ್ಲಿ ಯಾವದೊಂದು ಪದದ ಮೊದಲಿನ ವರ್ಣವಿರಬೇಕು. ಹಿಂದಿನ ಪದದ ಕಡೆಯ ವರ್ಣವು ಅದರಲ್ಲಿ ಕೂಡಿದರೂ ದೋಷವಿಲ್ಲ, ಹೇಗಂದರೆ:—

ಮತ್ತೇಭವಿಕ್ರೀಡಿತಂ.

ಸರದೊಳ್ ಕಂಗಳ ಮುಚ್ಚಿತಂಚೆ ನೆಳಲೊಳ್ ಪಂಕೇಜ-
ಪತ್ರಂಗಳ ।
ತೊರೆದತ್ತಾತಪ-ತಾಪದಿಂ ಕಲರವಂ ಸೌಧಾಗ್ರ ಸಂಚಾ-
ರಮಂ ॥
ಪರಿತರ್ಕುಂ ಶಿಖಿ ವಾರಿಯಂತ್ರದೆಡೆಯೊಳ್ ತುಂತು-
ರ್ಗಳಂ ಪೀರಲೆಂ- ।
ದರಸಾ ಪೂರ್ಣಕರಂಗಳಿಂ ಗುಣದೆ ನೀನೆಂತಂತಿನಂ
ದೀಪಿಕುಂ. ॥ ೬ ॥

ಆರ್ಯಾವೃತ್ತಂ.

ಧೌತವಿಶುದ್ಧಾಂಬರದೊಳ್ ।
ಖ್ಯಾತಮೆನಿಸುವಂತೆ ವರ್ಣವಿನ್ಯಾಸಂ ॥
ನೀತಿಯುದಾಹೃತಿಮುಖದಿಂ- ।
ದಾತರುಣರ ಚಿತ್ತದಲ್ಲಿ ನೆಲೆಗೊಳ್ಗುಂ. ॥ ೭ ॥

ಈ ಮೇಲಿನ ಎರಡು ಪದ್ಯಗಳಲ್ಲಿ ಮತ್ತೇಭವಿಕ್ರೀಡಿತ ವೃತ್ತದ ಚರಣದ ಹದಿಮೂರನೆಯಕ್ಕರಕ್ಕೆ ಯತಿಯಿರಬೇಕು, ಚರಣಾಂತ ದಲ್ಲಿಯೂ ಇರಬೇಕು. ಆದರಂತೆ ೩ನೆಯ ಚರಣದ ಕಡೆಯ ವರ್ಣವಾದ 'ದು' ಎಂಬ ವರ್ಣವು ೪ನೆಯ ಚರಣದಾರಂಭದ 'ಅರಸಾ' ಎಂಬ ಶಬ್ದದ ಅಕಾರದಲ್ಲಿ ಕೂಡುವಾಗ 'ದು' ವರ್ಣ ದೊಳಗಿನ ಉಕಾರಕ್ಕೆ ಲೋಪವಾಗಿ ಉಳಿದ ದಕಾರವು ನಾಲ್ಕ ನೆಯ ಚರಣದಾದಿ ಅಕಾರದಲ್ಲಿ ಕೂಡಿದೆ. ಆದರೂ ಯತಿಚ್ಛೇದ ವಾಗಲಿಲ್ಲೆಂದು ತಿಳಿಯಬೇಕು.

ಇದರಂತೆ ೪ನೆಯ ಚರಣದ ಹದಿಮೂರನೆಯಕ್ಷರದ ಸ್ಥಾನದಲ್ಲಿರುವ 'ಸೇನ್' ಎಂಬ ಶಬ್ದದ ಕಡೆಯ ನಕಾರವು ತನ್ನ ಮುಂದಿನ ಎಕಾರದಲ್ಲಿ ಕೂಡಿದೆ. ಇಲ್ಲಿಯೂ ಯತಿಭಂಗವಾಗಲಿಲ್ಲ.

ಇದರಂತೆ ಆರ್ಯಾವೃತ್ತದ ಮೂರನೆಯ ಚರಣದ ಕಡೆಯ 'ದ' ವರ್ಣದೊಳಗಿನ ದಕಾರವು ನಾಲ್ಕನೆಯ ಚರಣದ ಆದಿಯಾದ ಆಕಾರದಲ್ಲಿ ಕೂಡಿದೆ. ಇಲ್ಲಿಯೂ ಯತಿಭಂಗವಾಗಿಲ್ಲ; ಏಕಂದರೆ ಈ ಎಲ್ಲ ಸ್ಥಳಗಳಲ್ಲಿಯೂ ಹೊಸ ಯತಿಯಾರಂಭಕ್ಕೆ ಹೊಸ ಶಬ್ದಗಳ ಮೊದಲಿನಕ್ಕರಗಳುಂಟು. ಆದರೆ ಈ ಸಂಧಿಯ ನಿಯಮಗಳು ಪದ್ಯದ ಪೂರ್ವಾರ್ಧದ ಕಡೆಯ ವರ್ಣಕ್ಕೂ ಉತ್ತರಾರ್ಧದ ಆದಿವರ್ಣಕ್ಕೂ ಹತ್ತುವದಿಲ್ಲ. ಕವಿತೆಯ ಪೂರ್ವಾರ್ಧದ ಕಡೆಯ ವರ್ಣಕ್ಕೂ ಉತ್ತರಾರ್ಧದ ಆದಿವರ್ಣಕ್ಕೂ ಸಂಧಿಯಾಗಿರಕೂಡದು. ಮತ್ತು ಪೂರ್ವಾರ್ಧದ ಕೊನೆಯಲ್ಲಿ ಅವ್ಯಕ್ತವಿಭಕ್ತಿಯಾದರೂ ಇರಕೂಡದು, ವ್ಯಕ್ತವಿಭಕ್ತಿಯೇ ಇರಬೇಕು. ಈ ಮಾತನ್ನು ಮೇಲೆ ಹೇಳಿದ್ದೇವೆ. ಉದಾಹರಣಗಳನ್ನು ಕೊಟ್ಟಿದ್ದೇವೆ.

ಯತಿಭಂಗದೋಷಕ್ಕೆ ಉದಾಹರಣವು:

ಮತ್ತೇಭವಿಕ್ರೀಡಿತವೃತ್ತಂ.

ಚತುರಂ†ಭೋಧಿಪರೀತಭೂತಳದ †ಭೂಪರ್ ಕಪ್ಪಮಂ
†ತರ್ಪರು |
ದ್ಧತ†ವೃತ್ತಪ್ರಭವಿಷ್ಣುಸಿಂಹಳನದೆಂದುಂ ತೆತ್ತನಲ್ತೆಂದು
†ಪೇ ||
ಳೆ ತದುದ್ಯದ್ಗಣಕಾಳಿ ಕೇಳಿ ಕೆರಳ್ದು ಸತ್ಯೇಂದ್ರಚೋಳೇಂ
†ದ್ರಚಂ |

ದ್ರುತನುಪ್ರೋದ್ಭವರಾಜಶೇಖರನರೇಂದ್ರಂ ಬಂದಪಂ
ಭೂಮಿಪಾ. ॥ ೮ ॥

ಈ ಪದ್ಯದಲ್ಲಿ † ಈ ಚಿಹ್ನವಿದ್ದ ಅಕ್ಷರಕ್ಕೆ ಯತಿಯು ಇರುತ್ತದೆ. ಆದರೆ ಅಲ್ಲಿ ವ್ಯಕ್ತವಿಭಕ್ತಿಯೂ ಇಲ್ಲ, ಅವ್ಯಕ್ತವಿಭಕ್ತಿಯೂ ಇಲ್ಲ. ಅದರಿಂದ ಅಲ್ಲೆಲ್ಲ ಯತಿಭಂಗವಾಗಿರುತ್ತದೆ. * ಈ ಚಿಹ್ನವಿದ್ದಲ್ಲಿ ಮಾತ್ರ ಅವ್ಯಕ್ತವಿಭಕ್ತಿಯುಂಟು; ಅದರಿಂದ ಅಲ್ಲಿ ಯತಿಭಂಗವಾಗಿಲ್ಲ.

## ವೃತ್ತವಿಚಾರವು.

೨೩. ವೃತ್ತಗಳಲ್ಲಿ "ಅಕ್ಷರವೃತ್ತಗಳು", "ಮಾತ್ರಾವೃತ್ತಗಳು" ಎಂದು ಎರಡು ಭೇದಗಳುಂಟು. ಅಕ್ಷರವೃತ್ತಗಳಿಗೆ ಅಕ್ಷರಗಳ ಅಥವಾ ಅಕ್ಷರಗಣಗಳ ನಿಯಮವಿರುತ್ತದೆ. ಮಾತ್ರಾವೃತ್ತಗಳಿಗೆ ಮಾತ್ರೆಗಳ ಅಥವಾ ಮಾತ್ರಾಗಣಗಳ ನಿಯಮವಿರುತ್ತದೆ.

೨೪. ಮಾತ್ರಾವೃತ್ತಗಳಲ್ಲಿಯೂ ಅಕ್ಷರವೃತ್ತಗಳಲ್ಲಿಯೂ ಚರಣಗಳಲ್ಲಿರುವ ಲಕ್ಷಣಗಳ ಭೇದದಿಂದ ಸಮ, ಅರ್ಧಸಮ, ವಿಷಮವೃತ್ತಗಳೆಂದು ಮೂರು ಭೇದಗಳಾಗುತ್ತವೆ.

(ಅ.) ಸಮವೃತ್ತಗಳಿಗೆ ಎರಡು ಅಥವಾ ನಾಲ್ಕು ಚರಣಗಳಿರುತ್ತವೆ. ಮತ್ತು ಎಲ್ಲ ಚರಣಗಳಿಗೂ ಒಂದೇ ಲಕ್ಷಣವಿರುತ್ತದೆ, ಅಂದರೆ ಮಾತ್ರೆಗಳು, ಅಕ್ಷರಗಳು, ಯತಿಗಳು ಎಲ್ಲ ಚರಣಗಳಿಗೂ ಸರಿಯಾಗೇ ಇರುತ್ತವೆ.

ಉದಾಹರಣಗಳು:—ರಗಳೆ, ದ್ವಿಪದಿ. ಮಾತ್ರಾಸಮಕ, ಇಂದ್ರವಜ್ರಾ, ವಸಂತತಿಲಕ ಮುಂತಾದವು.

(ಇ.) ಅರ್ಧಸಮವೃತ್ತಗಳಿಗೆ ೪ ಅಥವಾ ೬ ಚರಣಗಳಿರುತ್ತವೆ. ನಾಲ್ಕು ಚರಣಗಳಿದ್ದರೆ, ೧ನೆಯ ಚರಣಕ್ಕೆ ೩ನೆಯದೂ

೨ನೆಯದಕ್ಕೆ ನಾಲ್ಕನೆಯದೂ ಸರಿಯಾಗಿರುತ್ತವೆ. ಆರು ಚರಣಗಳಿದ್ದರೆ, ೧ನೇ ೨ನೇ ೩ನೇ ಚರಣಗಳಿಗೆ ೪ನೇ ೫ನೇ ೬ನೇ ಚರಣಗಳು ಕ್ರಮದಿಂದ ಸರಿಯಾಗಿರುತ್ತವೆ. ಉದಾಹರಣವು:—

ಕಂದ, ಆರ್ಯಾ, ಷಟ್ಪದಿ ಮುಂತಾದವುಗಳು.

(ಕ.) ವಿಷಮವೃತ್ತಗಳಿಗೆ ಮೂರು ಅಥವಾ ನಾಲ್ಕು ಚರಣಗಳಿರುತ್ತವೆ. ಮತ್ತು ಆ ಎಲ್ಲಾ ಚರಣಗಳ ಲಕ್ಷಣಗಳು ಒಂದಕ್ಕೊಂದು ಭಿನ್ನವಾಗಿರುತ್ತವೆ. ನಮ್ಮ ಕನ್ನಡ ಭಾಷೆಯಲ್ಲಿ ಇಂಥ ಪದ್ಯಗಳು ಬಹುಶಃ ಇಲ್ಲ. ಆದರೆ ಸರ್ವಜ್ಞಕವಿಯಿಂದ ರಚಿತವಾದ "ತ್ರಿಪದಿ" ಎಂಬ ವೃತ್ತ ಮಾತ್ರ ಭಿನ್ನಲಕ್ಷಣಗಳ ಮೂರು ಚರಣಗಳುಳ್ಳದ್ದಾಗಿರುತ್ತದೆ.

೨೫. ಮುಂದೆ ಪದ್ಯಲಕ್ಷಣವನ್ನು ಆಯಾ ವೃತ್ತಗಳ ಒಂದೇ ಚರಣದಲ್ಲಿಯಾಗಲಿ ಎರಡು ಚರಣಗಳಲ್ಲಿಯಾಗಲಿ ಸಂಪೂರ್ಣ ವೃತ್ತದಲ್ಲಿಯಾಗಲಿ ನಮಗೆ ಅನುಕೂಲವಾದಂತೆ ಹೇಳಿರುತ್ತೇವೆ. ಆದರೆ ಉಳಿದ ಚರಣಗಳ ಲಕ್ಷಣಗಳನ್ನು ಹೇಳಿದ ಚರಣಗಳ ಲಕ್ಷಣಗಳ ಮೇಲಿಂದ ವಿದ್ಯಾರ್ಥಿಗಳು ತಿಳಿದುಕೊಳ್ಳಬೇಕು.

೨೬. ವೃತ್ತಗಳಲ್ಲಿ ಬರುವ ಗಣಗಳು, ಅಥವಾ ಗಣಾಕ್ಷರಗಳು, ಮಾತ್ರೆ, ಯತಿ, ವೃತ್ತದ ಹೆಸರು, ಇವುಗಳ ಹೊರತು ವ್ಯರ್ಥ ಶಬ್ದಗಳನ್ನು ಬರಗೊಟ್ಟಿಲ್ಲ.

೨೭. ಕನ್ನಡದಲ್ಲಿ ಮಾತ್ರಾವೃತ್ತಗಳೇ ಬಹಳವಾಗಿ ಇರುವದರಿಂದ ಮೊದಲು ಮಾತ್ರಾವೃತ್ತಗಳನ್ನೂ ಬಳಿಕ ಅಕ್ಷರವೃತ್ತಗಳನ್ನೂ ಹೇಳಿರುತ್ತೇವೆ.

## ೨. ವೃತ್ತಲಕ್ಷಣಪ್ರಕರಣ.

### ೧ನೆಯ ಭಾಗವು. ಮಾತ್ರಾವೃತ್ತಗಳು.

### ೧ನೆಯ ಸಂಧಿ. ಸಮವೃತ್ತವಿವರವು.

ಎರಡು ಚರಣಗಳ ವೃತ್ತಗಳು.

೧ ತ್ರಿಪುಡೆ. ೧.

ತ್ರಿಪುಡೆಗೀರಡಿಯೇಳ್ಗಣಂ ಗುರುವಡಿಗೆ, ಯತಿ ಗಣ ಸಾಲ್ಕರಿಂ ||
ಲಪಿತಮಸಮಗಣಂ ಕಲಾತ್ರಯಮಾಚತುಷ್ಕಲೆ ಸಮಗಣಂ. || ೧ ||

ಗಣವಿವರವೂ ಗಣದಲ್ಲಿಯ ಮಾತ್ರೆಗಳ ಸಂಖ್ಯೆಯೂ.

೩ | ೪ | ೩ | ೪ | ೩ | ೪ | ೩ | ಗ ||
೩ | ೪ | ೩ | ೪ | ೩ | ೪ | ೩ | ಗ | || ೧ ||

ಉದಾಹರಣಗಳು:

(ರಾಜಶೇಖರ ೧೩ನೆಯ ಆಶ್ವಾಸವು.)

ಮಗನೆ ನೀನಿಂತಳಿಯೆ ಸೈರಿಪೆನೆಂತು ಪೇಳ್ಳೈ ಶಂಕರಾ, |
ಸುಗುಣನಿಧಿ ನೀನೆನ್ನ ಮೊರೆಗಳನೊಮ್ಮೆ ಕೇಳ್ಳೈ ಶಂಕರಾ. || ೧ ||

ಪರಸಿ ಪಾಡಿ ಮಹೇಶನಿಂದಲೆ ಬೇಡಿ ಮುನ್ನಂ ಶಂಕರಾ, |
ತುರಗಖುರಕೆಂದಕಟ ಪೆತ್ತೆನೆ? ಕುವರ ನಿನ್ನಂ ಶಂಕರಾ. || ೨ ||

೨ ದ್ವಿಪದಿಯೂ ಚೌಪದಿಯೂ. ೨.

ಶರಕಲೆಯ ಮೂಗಣಂ, ದ್ವಿಕಲೆ ಗುರು ಕಡೆಗೆ, |
ವಿರತಿ ಹತ್ತನೆಯ ಕಲೆಗೀನಿಯುಮವಡಿಗೆ ||
ಎರಡು ಚರಣಂ ದ್ವಿಪದಿ, ನಾಲ್ಕು ಚೌಪದಿಯು, |
ಚರಣಾದಿಗಂತ್ಯಕ್ಕೆ ಮೇಣ್ ಪ್ರಾಸವಿಧಿಯು. || ೧ ||

ವಿವರವು—

| | | | | | | |
|---|---|---|---|---|---|---|
| ೫ | ೫ | ೫ | ೨ | ಗ | ದ್ವಿಪದಿ. | ಚೌಪದಿಯು. |
| ೫ | ೫ | ೫ | ೨ | ಗ || | | |
| ೫ | ೫ | ೫ | ೨ | ಗ | | |
| ೫ | ೫ | ೫ | ೨ | ಗ | | |

ಉದಾಹರಣ:

(ರಾವಣದಿಗ್ವಿಜಯವು.)

ಪ್ರಾಚೇತಸಾಖ್ಯಮುನಿಪತಿಯ ಬಲವಂದು |
ವಾಚಸ್ಪತಾಚಾರ್ಯನಡಿಗೆರಗಿ ನಿಂದು ||
ಗುರುಹಿರಿಯರಂಘ್ರಿಯಂ ನೆನದು ಮಾನಸದೆ |
ಧರೆಯ ಕವಿಗಳಿಗೆ ಕೈಮುಗಿದು ಸಂತಸದೆ. || ೨ ||

೩ ಸಾಕಿ. ೩.

(ಇದು ಮಹಾರಾಷ್ಟ್ರ ಭಾಷೆಯದಾದರೂ ಈಗ ಕನ್ನಡದಲ್ಲಿ ಕೆಲವರು ಉಪಯೋಗಿಸುತ್ತಾರೆ.)

ಶರನಿಧಿಮಾತ್ರೆಯ ಗಣಮೇಳರ್ಧದೆ, ವಿರತಿ ಚತುರ್ಗಣದಿಂದಂ |
ಗುರುಯುಗಮಂತ್ಯಗಣಂ ಪ್ರಾಸಂ ಕಡೆಗಿರೆ ಸಾಕಿಯೆನಿಪ ಛಂದಂ. || ೧ ||

ವಿವರವು—೪ | ೪ | ೪ | ೪, | ೪ | ೪ | ೪ (— —) |
೪ | ೪ | ೪ | ೪, | ೪ | ೪ | ೪ (— —) || ೧ ||

ಉದಾಹರಣಗಳು:

(ಉತ್ತರರಾಮಚರಿತ್ರ.)

ಬಿಳುಪೇರಿವೆ ಬಾಡಿಹವು ಕಪೋಲಂಗಳು ಸುಳಿಮುಂಗುರುಳಲ್ಲಿ |
ಸುಳಿದಾಡುತ್ತಿವೆ ಸುಂದರಮುಖಿ ಜಾನಕಿ ಬರುವಳು ವನದಲ್ಲಿ. || ೪ ||
ಕರುಣಾರಸದಾಕೃತಿಯಿಾ ಸತಿಯೈ ಮಿಥಿಲೇಂದ್ರಾನ್ವಯಜಾತೆ |
ವಿರಹವ್ಯಥೆಯೋ ಪ್ರತ್ಯಕ್ಷಮೆನಲ್ ತೋರುವಳೀ ಬಹ ಸೀತೆ. || ೫ ||

ನಾಲ್ಕು ಚರಣಗಳ ವೃತ್ತಗಳು.

೪ ಚೌಪದಿಯು. ೧.

ಇದರ ಲಕ್ಷಣವೂ ಉದಾಹರಣವೂ ಹಿಂದೆ ಹೇಳಲ್ಪಟ್ಟವು.

೫ ಸೀಸಪದ್ಯವು. ೨.

ಶರಮಾತ್ರೆಯ ಗಣಂಗಳೇಳರಿಂ ಗುರು ಕಡೆಗೆ
ವಿರತಿ ನಾಲ್ಕನೆಯ ಗಣದಿಂ ಕಡೆಯೊಳು |
ಚರಣಂಗಳೀತೆರದೊಳೀರೆರಡು ಕೂಡಿರಲ್
ಮೆರೆವುದೈ ಸೀಸಪದ್ಯಮೆನಿಸುವದು ||

ವಿವರವು— | ೫ | ೫ | ೫ | ೫, | ೫ | ೫ | ೫ | ಗ |
| ೫ | ೫ | ೫ | ೫, | ೫ | ೫ | ೫ | ಗ ||
| ೫ | ೫ | ೫ | ೫, | ೫ | ೫ | ೫ | ಗ |
| ೫ | ೫ | ೫ | ೫, | ೫ | ೫ | ೫ | ಗ || ೧ ||

ಉದಾಹರಣಗಳು:

(ಕೃಷ್ಣಪಾರಿಜಾತವು. ಸತ್ಯಭಾಮೆಯು ಬ್ರಹ್ಮನನ್ನು ಶಪಿಸಿದ್ದು.)

ನಗೆಗೇಡು ಮಾಡಿದಲ್ಲವೊ ನೀನು ನನ್ನನ್ನು
ಜಗದೊಳಗೆ ದಿಗ್ವಸ್ತ್ರನಾಗು ಕೃಷ್ಣಾ ||
ಹಗೆಯುವಳ ನೋಡೆನ್ನ ತಗಬಗೆಯ ಗೊಳಿಸಿದೆಯೊ,
ಹಗೆಗಳುದಿಸುವರು ನೀಂ ಹಯವನೇರು ||
ನಗಧರನೆ ನಾ ನಿನಗೆ ಭಾರವಾಗಿದ್ದೆನೇ?
ಜಗದೆ ವಿಧಿಯೆನ್ನ ಪುಟ್ಟಿಸಿದನೇಕೆ? ||
ಮುಗುಧೆಯುಸುರವನ ಮುಟ್ಟದಲಿಹುದೆ? ಮುನಿದು,
ನಗಸುತೆಯ ಪತಿಯವನ ತಲೆಕುಟ್ಟಲಮ್ಮಾ. || ೧ ||
ಅವನ ಪಟ್ಟದ ರಾಣಿಯವನಿಯೊಳು ತಿರುತಿನಲಿ
ಅವನ ಸೋದರಿ ಶಿವನ ಸೇರಲಿನ್ನು ||
ಅವನಿಗೊಡಹುಟ್ಟದವನಗ್ನಿವಶನಾಗಲೇ
ಅವನ ಸುತನಿದ್ದಲ್ಲಿ ಕದನ ಬರಲಿ ||
ಅವನ ಪೂಜಿಸ ಬೇಡವಖಿಲ ಲೋಕದ ಜನರು
ಅವನ ಪಟ್ಟಕೆ ಮುಂದೆ ಹನುಮ ಬರಲಿ ||
ಅವನೆನ್ನ ಪುಟ್ಟಿಸಿದ ನೆವನೇನೆ? ಅಮ್ಮಯ್ಯ
ನವಮಲ್ಲಿಕಾಶರವ ತಾಳಲಾರೆ. || ೨ ||

## ರಗಳೆಗಳು.

ಮಂದಾನಿಲ, ಲಲಿತ, ಉತ್ಸಾಹಗಳೆಂದು ಮೂರು ಪ್ರಕಾರದ ರಗಳೆಯೆಂಬ ವೃತ್ತಗಳಿವೆ. ಕವಿಗಳು ಈ ವೃತ್ತಗಳಲ್ಲಿ ಮನಸಿಗೆ ಬಂದಂತೆ ಪ್ರಾಸವಿಡುತ್ತಾರೆ. ಬಹುಶಃ ಎರಡು ಚರಣಗಳಿಗೆ ಒಂದು ರಗಳೆಯೆಂದು ತಿಳಿದು, ಆವೆರಡರಲ್ಲಿಯೂ ಆದ್ಯಂತಪ್ರಾಸಗಳನ್ನಿಡುತ್ತಾರೆ, ಅಥವಾ ಒಂದು ಚರಣದಲ್ಲೇ ಸಮದ್ವಿಭಾಗ ಮಾಡಿ ಆಯೆರಡು ಭಾಗಗಳಲ್ಲಿ ಆದ್ಯಂತಪ್ರಾಸಗಳನ್ನಿಡುತ್ತಾರೆ. ಇಂಥಾ ನಾಲ್ಕು ಚರಣಗಳಾದರೆ ರಗಳೆಯೆಂಬ ವೃತ್ತವಾಗುತ್ತದೆ.

೬ ಮಂದಾನಿಲರಗಳೆ. ೩.

ಈ ರಗಳೆಯ ಒಂದು ಚರಣದಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ನಾಲ್ಕು ಗಣಗಳಿರುತ್ತವೆ. ಎರಡನೆಯ ಗಣದಂತ್ಯದಲ್ಲಿ ಯತಿಯು.

ಉದಾಹರಣಗಳು:

(ರಾಜಶೇಖರ ೯.)

ಆವೇಳೆಯೊಳತಿಸಂಭ್ರಮಮೆಸೆದಿರೆ |
ಪೂವಳೆ ಪುರವೀಥಿಗಳೊಳು ನೆರೆದಿರೆ |
ಪವಳದ ರನ್ನದ ಗುದಿಗಳ ಗುಡಿಗಳ್ |
ನವಮೌಕ್ತಿಕರಂಗದದಾಂಗುಡಿಗಳ್. ||೮||

ಮೆರೆದುವು ಮಿರುಗುವ ಮಿಸುನಿಯ ತೋರಣ |
ಮರಿಕೆಯ ಪುರಜನದುತ್ಸವದೋರಣ- |
ಮಾನೆಯ ಮೇಲಣ ಪಳವಿಗೆ ಮಿಳಿರ್ದಿರೆ |
ನಾನಾವಿಧವಾದ್ಯಧ್ವನಿಯುಳುರ್ದಿರೆ. ||೯||

ಕರೆದುವು ಬಿರುದಿನ ಕಹಳೆಗಳಾಗಳ್ |
ಪರಿದುದು ಪಳಹದ ರವಮೆಣ್ದೆಸೆಯೊಳ್. ||

೭ ಮಾತ್ರಾಸಮಕಛ್ಛಂದಸ್ಸು. ೪.

ಮಂದಾನಿಲರಗಳೆಯ ಚರಣಗಳಂಥವೇ ನಾಲ್ಕು ಚರಣಗಳು ಮಾತ್ರಾಸಮಕಕ್ಕೂ ಬೇಕು. ಆದರೆ ಪ್ರತಿ ಚರಣದ ಮೂರನೆಯ ಗಣದ ಪ್ರಾರಂಭಕ್ಕೆ ಲಘುವರ್ಣವೂ ಚರಣಾಂತದಲ್ಲಿ ಗುರುವರ್ಣವೂ ಇರಬೇಕು. ನಾಲ್ಕು ಚರಣಗಳಿಗೆ ಅಥವಾ ಎರಡೆರಡಕ್ಕೆ ಆದಿಪ್ರಾಸವಿರಬೇಕು. ಅಂತ್ಯಪ್ರಾಸದ ನಿಯಮವಿಲ್ಲ.

ಉದಾಹರಣ:

(ರಾಜಶೇಖರ ೧೪ನೇ ಆಶ್ವಾಸ.)

ಪಿಂದೆಸೆ ಸುಮನೋರಮಣಾದ್ಯರಿರಲ್ ।
ಮುಂದೆಸೆ ರಂಭಾವಧು ಕುಣಿಯುತಿರಲ್ ।
ಮುತ್ತಿನ ಸತ್ತಿಗೆ ತೊಳತೊಳಗುತಿರಲ್ ।
ಸುತ್ತಿ ತನುದ್ಯುತಿ ತಳತಳಸುತಿರಲ್. ॥ ೧೦ ॥

೮ ವಿಶ್ಲೋಕವು. ೫.

ಮಾತ್ರಾಸಮಕದ ಚರಣದ ಎರಡನೆಯ ಗಣವು ಸಗಣ ಅಥವಾ ಜಗಣವಿದ್ದರೆ ವಿಶ್ಲೋಕವಾಗುತ್ತದೆ. ಉದಾಹರಣ:--

ಕರೆದುವು ಬಿರುದಿನ ಕಹಳೆಗಳಾಗಳ್ ।
ಪರಿದುದು ಪಳಹದ ರವಮೆಣ್ದೆಸೆಯೊಳ್. ॥ ೧೧ ॥

೯ ಲಲಿತರಗಳೆ. ೬.

ಪ್ರತಿ ಚರಣದಲ್ಲಿ ಐದೈದು ಮಾತ್ರೆಯ ನಾಲ್ಕು ಗಣಗಳಿರಬೇಕು. ಎರಡನೆಯ ಗಣದ ಕಡೆಗೆ ಯತಿಯು ಇರಬೇಕು.

ಉದಾಹರಣ:

(ರಾಜಶೇಖರ ೧೦ನೇ ಆಶ್ವಾಸ.)

ಅಲ್ಲಿಮಾಮರದಲ್ಲಿ ಮಲ್ಲಿಕಾಲತೆಯಲ್ಲಿ ।
ಎಳೆಯಸುಗೆಮರದಲ್ಲಿ ಜಳರುಹಾಕರದಲ್ಲಿ ॥
ಸಂಪಗೆಯ ತರುಗಳೊಳ್ ಸೊಂಪಿಡಿದ ಸುರಯಿಯೊಳ್ ।
ಪಾದರಿಯ ಮರದಲ್ಲಿ ಮಾಧವಿಯ ಲತೆಯಲ್ಲಿ. ॥ ೧೨ ॥
ತಿಳಕಬಕುಳಾದಿತರುನಿವಹದಾರವೆಗಳೊಳ್ ।
ದಳಫಳಕುಸುಮವಿಸರವಿದಿತವಿಟಪಂಗಳೊಳ್ ॥
ಪೂಗೊಯ್ಯಲೆಂದಬಲೆಯರ್ ನೆರೆದು ಬಗೆದಂದು ।
ಬೇಗದಿಂ ಪರಿತಂದು ಪರಿತೋಷದಿಂ ನಿಂದು. ॥ ೧೩ ॥

### ೧೦ ಉತ್ಸಾಹ. ೭.

ಮೂರುಮೂರು ಮಾತ್ರೆಗಳ ೮ ಗಣಗಳು ಚರಣಕ್ಕೆ. ನಾಲ್ಕನೆಯ ಗಣದ ಅಂತ್ಯದಲ್ಲಿ ಯತಿ ಇರುತ್ತದೆ.

ಉದಾಹರಣಗಳು:

ಅಟ್ಟ ಅನ್ನ ಉಣ್ಣ ಬಿಡನು, ಕೊಟ್ಟ ಸಾಲ ಕೇಳ ಬಿಡನು, |
ಪೆಟ್ಟಿಯೊಳಹ ಚಿನ್ನದೊಡವೆ ತೊಟ್ಟೆನೆನಲು ಯಮನು ಬಿಡನು. ||
ಅಕ್ಕನನ್ನು ಕರೆಯಲಿಲ್ಲ, ಮಕ್ಕಳನ್ನು ಪಡೆಯಲಿಲ್ಲ, |
ದುಕ್ಕಗೊಂಡು ಕಣ್ಣನೀರನುಕ್ಕಿಸಿದರೆ ಯಮನು ಬಿಡನು. || ೧೪ ||

---

## ೬ನೆಯ ಸಂಧಿ. ಅರ್ಧಸಮವೃತ್ತಗಳು.

### ನಾಲ್ಕು ಚರಣದವು. ಆರ್ಯಾವೃತ್ತಗಳು.

(ಸಾಧಾರಣಲಕ್ಷಣವು.)

ಗೀತಿ ಅಥವಾ ಆರ್ಯಾ.

ಪ್ರತಿಯೊಂದು ಗಣಕೆ ಮಾತ್ರಾ |
ಚತುಷ್ಕಮಿಂತೇಳ್‌ಗಣಂಗಮಾರ್ಯಾರ್ಧಂ. ||
ಪ್ರತಿವಿಷಮಸ್ಥಾನದೆ ಜಂ |
ಮತಮಲ್ತದು ಷಷ್ಠಮಲ್ಲದಿರೆ ನಗಣಂ. || ೧೫ ||

ಅರ್ಥ:—ನಾಲ್ಕುನಾಲ್ಕು ಮಾತ್ರೆಗಳ ಏಳು ಗಣಗಳೂ ಕಡೆಯಲ್ಲಿ ಒಂದು ಗುರುವರ್ಣವೂ ಇದ್ದರೆ ಆರ್ಯಾರ್ಧವಾಗುತ್ತದೆ. ಈ ಗಣಗಳೊಳಗಿನ ವಿಷಮಸ್ಥಾನದಲ್ಲಿ ಜ ಗಣವಿರಬಾರದು, ಅದು ೬ನೇ ಸ್ಥಾನದಲ್ಲಿರಬೇಕು; ಅಥವಾ ೬ನೇ ಸ್ಥಾನದಲ್ಲಿ ನ ಗಣವಿರಬೇಕು, ಮತ್ತೆ ಯಾವದೂ ಇರಬಾರದು.

೧೧ ಗೀತಿ ಅಥವಾ ಆರ್ಯಾ. ೧.

ಚರಣಂ ನಾಲ್ಕುಸಮಾಂಘ್ರಿಗೆ ।
ಬರಿಸು ಗಣತ್ರಿತಯಮಂ ಸಮದ್ವಯಕೆ ॥
ಇರಿಸು ಗಣಚತುಷ್ಟಯಮಂ ।
ಗುರುವಂ ಕಡೆಗಿಡದು ಗೀತಿಯೆಂದೆನಿಕುಂ. ॥ ೧ ॥

ಉದಾಹರಣ:

(ಉತ್ತರರಾಮಚರಿತ್ರ.)

ನೀನೇ ಜಗತೀನಾಥನ ।
ಜಾನಕಿ ತೆರಳೆಬ್ಬಿಸಲ್ಕೆ ಕಲ್ಯಾಣೀ ॥
ಈ ನಿನ್ನರಸನ ಜೀವ-
ಕ್ಕಾನಂದಸ್ಪರ್ಶಕಂ ಭವತ್ಪಾಣಿ. ॥ ೧೬ ॥

ಮಂಜೆಂದೆ ತೊಯ್ದು ಶೋಭಿಪ ।
ಮಂಜುಳತರಪುಂಡರೀಕಮೆಂದೆನಿಕುಂ ॥
ಸಂಜಾತಾಶ್ರುಕ್ಲಿನ್ನಂ ।
ರಂಜಿಸುವೀಲೋಕಮಂಗಳಂ ವದನಂ. ॥ ೧೭ ॥

೧೨ ಕಂದ (ಆರ್ಯಾಗೀತಿ). ೨.

ಕಂ*ದಮನಾರ್ಯಾಗೀತಿಕೆ।
ಯೆಂದರ್ ಸಂಸ್ಕೃತದೆ ಮೂಗಣಂ ಬೆಸದಡಿಯೊಳ್ ||
ಒಂದುಗುವೈದು ಸಮಾಂಘ್ರಿಗೆ।
ಪೊಂದುಗುವೈದನೆಯ ಗಣಮದಂತ್ಯಗಮಕ್ಕುಂ. || ೧ ||

ಉದಾಹರಣ:

(ಗಿರಿಜಾಕಲ್ಯಾಣ.)

ಈಸುಕುಮಾರತೆಯೀನಲು-।
ವೀಸುಕರತೆಯೀನವೀನಯೌವನಮುದವೀ ||
ಭಾಸುರತೆಯೀಸುಧಾಮಯ-।
ವೀಸುಖದೊಳ್ತಪಮಿದೆಂತು ಬಂದುದು ಮುಗ್ಧೇ? || ೧೮ ||

ಎಳೆಗೆಂಪನುಗುಳ್ವ ಮೃದುಕೋ-।
ಮಳಪದಕಮಳಂಗಳೀಗಲತಿಕಠಿನಮೆನಿ- ||
ಪ್ಪಿಳೆಯೊಳು ಹರ ಹಾ! ಕಲ್‌ನೆಲ-।
ಕಳವಟ್ಟುವಿವೆಂತು? ಬಾಲಹಂಸೀಯಾನೇ. || ೧೯ ||

೧೩ ವೈತಾಳಿಕಾಚ್ಛಂದಸ್ಸು. ೩.

ಕರಿಕಲೆ ಸರಿಗಾರಯುಗ್ಮಕ್ಕೈ-।
ದಿ ರ ಲಂ ಗಂ ಕಡೆಯಲ್ಲಿ ಬಂದೊಡೆ ||

---

* ಆಸಮಾಂಘ್ರಿಗೆ ಮೂರು ಗಣಂ।
ಮಸಾಂತಜನ ಮಧ್ಯವಿಂ ಸಮಕ್ಕಯುಗ್ಮ ಗಣಂ ||
ಬೆಸನೆಡೆಗಜಗಣನಿಯಮದಿ-।
ನೆಸೆವುದು ಕಂದಂ ಚತುಷ್ಕಲದ್ವ್ಯಷ್ಟಗಣಂ. || ೧ ||

**ಸರಿಕಲೆ ಪರಮಾತ್ರೆಯಿಂದೆ ಬೇ- |**
**ರಿರೆ ವೈತಾಳಿಕೆಯೆಂಬ ವೃತ್ತಮೈ.** || ೧ ||

ಅರ್ಥ: ಸಮಚರಣಗಳಲ್ಲಿ ಎಂಟೂ ವಿಷಮಚರಣಗಳಲ್ಲಿ ಆರೂ ಮಾತ್ರೆಗಳು ಬಂದ ಮೇಲೆ ರ ಲ ಗ ಗಳು ಬಂದರೆ, ಮೊದಲಿನ ಮಾತ್ರೆಗಳಲ್ಲಿ ಸಮಸ್ಥಾನದ ಮಾತ್ರೆಯು ತನ್ನ ಮುಂದಿನ ಮಾತ್ರೆಯಲ್ಲಿ ಕೂಡಿರದಿದ್ದರೆ ವೈತಾಳಿಕಾಚ್ಛಂದಸ್ಸಾಗುತ್ತದೆ.

ಉದಾಹರಣ:

(ರಘುವಂಶ ೮ನೇ ಸರ್ಗವು.)

೧೪ ಔಪಚ್ಛಂದಸಿಕವೃತ್ತವು. ೪.

**ಅದುಪಚ್ಛಂದಂ ಗವೊಂದೆ ಪೆರ್ಚಿ- |**
**ರ್ದು ವೈತಾಳಿಕೆಯಂಘ್ರಿಯಂತ್ಯದಲ್ಲಿ ||**
**ಬದಗಿರೆ ಲ ಗ ದಂತ್ಯದೊಳ್ ಗ ಕಾರಂ |**
**ವಿದಿತಂ ಯಗಣಮುದಪ್ಪುದೆಂಬುದಲ್ತೇ?** || ೧ ||

ಆರು ಚರಣಗಳ (ಷಟ್ಪದೀ) ವೃತ್ತಗಳು.

ಕನ್ನಡದಲ್ಲಿ ಷಟ್ಪದಿಗಳ ಕಾವ್ಯಗಳೇ ವಿಪುಲವಾಗಿವೆ. ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಿಕಗಳೆಂದು ೬ ಷಟ್ಪದಿಗಳಿವೆ. ಈ ವೃತ್ತಗಳಿಗೆ ೬ ಚರಣಗಳು. ಅವುಗಳಲ್ಲಿ ನಾಲ್ಕು ಸಣ್ಣವು, ಎರಡು ದೊಡ್ಡವು. ಮೊದಲು ಎರಡು ಸಣ್ಣ ಚರಣಗಳಿರುತ್ತವೆ. ಮೂರನೇ ಚರಣವು ದೊಡ್ಡದಿರುತ್ತದೆ. ಇಂಥ ಮೂರು ಚರಣಗಳಿಂದ ಅರ್ಧವೃತ್ತವಾಗುತ್ತದೆ. ಇಂಥ ಎರಡರ್ಧಗಳಿಗೆ ಒಂದು ವೃತ್ತವಾಗುತ್ತದೆ. ಸಣ್ಣ ಚರಣದ ೧ || ಪಾಲು ಗಣಗಳೂ ಒಂದು ಗುರುವೂ ಕೂಡಿದರೆ, ದೊಡ್ಡ ಚರಣವಾಗುತ್ತದೆ.

ಈ ಷಟ್ಪದಿಗಳಲ್ಲಿ ಪ್ರತಿಯೊಂದು ಗಣದಾರಂಭಕ್ಕೆ ಜ, ಯ ಗಣಗಳೂ ಇವ್ರಗಳ (◡–) ಈ ಅವಯವವೂ ಇರಬಾರದು, ಇದ್ದರೆ ಷಟ್ಪದಿಗಳು ತಪ್ಪುತ್ತವೆ. ಈ ವೃತ್ತಗಳ ಪೂರ್ವೋತ್ತರಾರ್ಧ ಗಳ ಕಡೆಯಲ್ಲಿ ವ್ಯಂಜನಗಳಿರಬಾರದು.* ಈ ಆರು ಷಟ್ಪದಿಗಳ ಲಕ್ಷಣಗಳು ಹ್ಯಾಗಂದರೆ:—

೧೫ ಶರಷಟ್ಪದಿ. ೧.

ಶರನಿಧಿಮಾತ್ರಗ- । ಳೆರಡೆರಡು ಗಣಂ ।
ಚರಣದ್ವಯದಲಿ ಮೂರನೆಯಾ ॥
ಚರಣದೆ ಮೂರವು । ಗುರುಕಡೆಗೀಪರಿ ।
ಶರಷಟ್ಪದಿಗೆರಡರ್ಧಗಳು. ॥ ೧ ॥

೧೬ ಕುಸುಮಂ. ೨.

ಶರಮಾತ್ರಯ ಗಣಂಗ- । ಳೆರಡೆರಡು ಮೊದಲೆರಡು ।
ಚರಣಂಗಳಲ್ಲಿ ಮೂರನೆಯಡಿಯೊಳು ॥
ಇರುತಿಹುದು ಮೂಗಣಂ । ಗುರುಕಡೆಯೊಳರ್ಧಂಗ- ।
ಳೆರಡಿಂತು ಕುಸುಮಷಟ್ಪದಿಗಿಪ್ಪುವು. ॥ ೧ ॥

೧೭ ಭೋಗ. ೩.

ಕಿರಿಯ ಚರಣವೆರಡರಲ್ಲಿ ।
ಬರಿಸಿ ನಾಲ್ಕು ನಾಲ್ಕು ಗಣವ ।
ಪಿರಿಯ ಮೂರನೆಯ ಚರಣದೆ ಷಡ್ಗಣಂಗಳಾ ॥

* ಏಕಂದರೆ ವ್ಯಂಜನವಿದ್ದರೆ ಸ್ವರವನ್ನೆಳೆಯಲಿಕ್ಕೆ ವಿಘ್ನವಾಗುತ್ತದೆ. ಈ ಮಾತು ಲಕ್ಷ್ಮೀಶನ ಹೊರತು ಮತ್ತೆ ಯಾವ ಕವಿಗೂ ತಿಳಿವಿದ್ದಂತೆ ತೋರುವದಿಲ್ಲ.

ಬರೆದು ಕಡೆಯೊಳೊಂದು ಗುರುವ- |
ನಿರಿಸಲರ್ಧವಿಂತು ಪರದೊ- |
ಳಿರಲು ಭೋಗಷಟ್ಪದಿ ಕಲೆ ಮೂರು ಗಣದಲಿ. ||೧||

೧೮ ಭಾಮಿನಿ. ೪.

ಮೊದಲೆರಡುನಾಲ್ಕೈದನೆಯ ಲಘು- |
ಪದಗಳೊಂದೊಂದಕೆ ಚತುರ್ಗಣ- |
ಮೊದಗಿ ಮೂರಾರನೆಯಡಿಗಳೊಂದೊಂದಕಾರ್ಗಣದಾ ||
ತುದಿಗೆ ಗುರುವಿರೆ ಭಾಮಿನೀಷಟ್- |
ಪದಿ; ಚತುಷ್ಕಲೆ ಸಮಗಣದೊಳಿ- |
ರ್ಪುದು ಕಲಾತ್ರಿತಯಂ ವಿಷಮ ಗಣಕಿಹುದು ತಪ್ಪದಲೇ.
||೧||

೧೯ ಪರಿವರ್ಧಿನಿ. ೫.

ಕಿರಿಯುಡಿ ನಾಲ್ಕರೊಳೊಂದೊಂದಕ್ಕಂ |
ಶರನಿಧಿಮಾತ್ರೆಯ ನಾಲ್ಕು ಗಣಂಗಳ್ | [ಲು ||
ಪಿರಿಯುಡಿಯೆರಡರೊಳೊಂದೊಂದಕ್ಕಾರುಂ ಗುರುವುಂ ಬರ
ಪರಿವರ್ಧಿನಿ ಕಿರಿಯುಡಿ ಮೊದಲೆರಡೈ |
ಪಿರಿಯುಡಿ ಮೂರನೆಯದು ಪೂರ್ವಾರ್ಧಂ |
ಪರದಿನ್ನೊಂದರ್ಧಕ್ಕಿಂತಡಿಲೆಕ್ಕಂ ಷಟ್‌ಪದಿಗಳೊಳು. ||೧||

೨೦ ವಾರ್ಧಿಕ. ೬.

ಬಂದೆರಡು ನಾಲ್ಕೈದನೆಯ ಪದಂಗಳೊಳಿರ್ಪ |
ವೊಂದೊಂದರಲಿ ಪಂಚಮಾತ್ರೆಯ ಗಣಂ ನಾಲ್ಕು. |
ಮುಂದೆ ಮೂರಾರನೆಯ ಪಾದಂಗಳೊಳಗಾರು ಕಡೆಗೆ
ಗುರು ವಾರ್ಧಿಕಕ್ಕೆ. |

## ೩ನೆಯ ಸಂಧಿ. ವಿಷಮವೃತ್ತಗಳು.

ಮೂರು ಚರಣವುಳ್ಳದ್ದು.

೨೧ ತ್ರಿಪದಿಯು. ೧.

ಮೊದಲನೇ, ಎರಡನೇ ಚರಣಗಳಲ್ಲಿ ನಾಲ್ಕು ನಾಲ್ಕು ಗಣಗಳೂ ಮೂರನೆಯ ಚರಣದಲ್ಲಿ ಮೂರು ಗಣಗಳೂ ಇರಬೇಕು. ಎರಡನೇ ಮೂರನೇ ಚರಣಗಳ ಎರಡನೆಯ ಗಣಗಳಿಗೆ ಮೂರು ಮೂರು ಮಾತ್ರೆಗಳಿರಬೇಕು. ಉಳಿದ ಗಣಗಳೆಲ್ಲಾ ಐದೈದು ಮಾತ್ರೆಯವಿರುತ್ತವೆ. ಪ್ರಥಮ ಚರಣದಲ್ಲಿ ಎರಡನೆಯ ಗಣದ ಕಡೆಗೆ ಯತಿಯು ಇರುತ್ತದೆ; ಇದಲ್ಲದೆ ಅದೇ ಚರಣದ ಮೊದಲನೇ ಮೂರನೇ ಗಣಗಳ ದ್ವಿತೀಯಾಕ್ಷರಗಳು ಒಂದೇ ಬಳ್ಳಿಯೊಳಗಿನವೇ ಇರಬೇಕು, ಅಂದರೆ ಪ್ರಾಸವಿರಬೇಕು; ಹೀಗಿದ್ದರೆ ತ್ರಿಪದಿಯಾಗುತ್ತದೆ. ಉದಾಹರಣಗಳು:—

ಸರ್ವಜ್ಞಗಳು.

**ಖಂಡಿಸದೆ ಕರಣವನು, ದಂಡಿಸದೆ ದೇಹವನು ।**
**ಉಂಡುಂಡು ಸ್ವರ್ಗಕೈದಲಿಕ್ಕದನೇನು ।**
**ರಂಡೆಯಾಳುವಳೆ? ಸರ್ವಜ್ಞ.** ॥ ೨೦ ॥
**ಆಕೆಯನು ಕಂಡು ಮನೆಯಾಕೆಯನು ಮರೆತರೆ, ।**
**ಹಾಕಿದಾವುಂಕಿ ಹರಿದಂತೆ ಮನೆಯೊಳರು- ।**
**ವಾಕೆಯೋ ಕೆಡಳೆ? ಸರ್ವಜ್ಞ.** ॥ ೨೧ ॥

---

## ೨ನೆಯ ಭಾಗವು. ಅಕ್ಷರವೃತ್ತವಿವರವು.

## ೧ನೆಯ ಸಂಧಿ. ಸಮವೃತ್ತಗಳು.

ನಾಲ್ಕು ಚರಣದವು.

೨೮. ಅಕ್ಷರಸಮವೃತ್ತಗಳಲ್ಲಿ ಇಪ್ಪತ್ತಾರು ಮುಖ್ಯಭೇದಗಳುಂಟು. ಅವುಗಳಿಗೆ ಛಂದಸ್ಸುಗಳೆಂಬ ಸಾಮಾನ್ಯನಾಮವದೆ.

ಈ ಇಪ್ಪತ್ತಾರು ಛಂದಸ್ಸುಗಳು ವೃತ್ತಗಳ ಚರಣಕ್ಕಿರುವ ಅಕ್ಷರಗಳ ಗಣನೆಯಿಂದ ಆಗಿರುತ್ತವೆ. ಹೇಗಂದರೆ:—

ಒಂದಕ್ಷರದ ಚರಣವುಳ್ಳ ವೃತ್ತಗಳ ಜಾತಿಗೆ ಉಕ್ತಾಚ್ಛಂದಸ್ಸೆಂತಲೂ ಎರಡಕ್ಷರಗಳ ಚರಣವುಳ್ಳ ವೃತ್ತಗಳ ಜಾತಿಗೆ ಅತ್ಯುಕ್ತಾಛಂದಸ್ಸೆಂತಲೂ ಹೆಸರು. ಹೀಗೇ ಮುಂದಾದರೂ ತಿಳಿಯಬೇಕು. ಈ ಛಂದಸ್ಸುಗಳ ಶ್ಲೋಕಗಳನ್ನು ಕೆಳಗೆ ಬರೆಯುತ್ತೇವೆ.

## अनुष्टुप् श्लोक.

उक्तात्युक्ता तथा मध्या । प्रतिष्ठान्या सुपूर्विका ॥
गायत्र्युष्णिगनुष्टुप् च । बृहती पंक्तिरेव च ॥ १ ॥
त्रिष्टुप् च जगती चैव । तथातिजगती मता ॥
शक्करी सातिपूर्वा स्यात् । अष्टचत्यष्टी ततःस्मृता ॥ २ ॥
धृतिश्चातिधृतिश्चैव । कृतिःप्रकृतिराकृतिः ॥
विकृतिःसंस्कृतिश्चापि । तथाभिकृतिरुत्कृतिः ॥ ३ ॥

ಅರ್ಥ:—೧ ಉಕ್ತಾ, ೨ ಅತ್ಯುಕ್ತಾ, ೩ ಮಧ್ಯಾ, ೪ ಪ್ರತಿಷ್ಠಾ, ೫ ಸುಪ್ರತಿಷ್ಠಾ, ೬ ಗಾಯತ್ರಿ, ೭ ಉಷ್ಣಿಕ್, ೮ ಅನುಷ್ಟುಪ್, ೯ ಬೃಹತಿ, ೧೦ ಪಂಕ್ತಿ, ೧೧ ತ್ರಿಷ್ಟುಪ್, ೧೨ ಜಗತಿ, ೧೩ ಅತಿಜಗತಿ, ೧೪ ಶಕ್ವರಿ, ೧೫ ಅತಿಶಕ್ವರಿ, ೧೬ ಅಷ್ಟಿ, ೧೭ ಅತ್ಯಷ್ಟೀ, ೧೮ ಧೃತಿ, ೧೯ ಅತಿಧೃತಿ, ೨೦ ಕೃತಿ, ೨೧ ಪ್ರಕೃತಿ, ೨೨ ಆಕೃತಿ, ೨೩ ವಿಕೃತಿ, ೨೪ ಸಂಸ್ಕೃತಿ, ೨೫ ಅಭಿಕೃತಿ, ೨೬ ಉತ್ಕೃತಿ.

೨೯. ಇಪ್ಪತ್ತಾರು ಅಕ್ಷರಗಳಿಗಿಂತ ಹೆಚ್ಚು ಅಕ್ಷರಗಳ ಪಾದವುಳ್ಳ ವೃತ್ತಗಳಲ್ಲಿ ಮಾಲಾವೃತ್ತಗಳೆಂದೂ ದಂಡಕಗಳೆಂದೂ ಎರಡು ಭೇದಗಳವೆ. ಅವುಗಳ ವಿವರವು ಮುಂದೆ ಬರುವದು.

೩೦. ಕನ್ನಡ ಭಾಷೆಯಲ್ಲಿ ಅಕ್ಷರವೃತ್ತಗಳು ಬಹಳವಾಗಿ ಇಲ್ಲ. ಇತ್ತಲಾಗಿನ ಸಂಸ್ಕೃತಾಭ್ಯಾಸ ಮಾಡಿದ ಕನ್ನಡಿಗರು

ಸಂಸ್ಕೃತದಂತೆ ಅಕ್ಷರವೃತ್ತಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ಆದರೆ ಕನ್ನಡದಲ್ಲಿ ಸ್ವಾಭಾವಿಕವಾಗಿ ಉದ್ದುದ್ದನ್ನ ಶಬ್ದಗಳು ಬಹಳ ಇರುವದರಿಂದ ಸಣ್ಣ ಸಣ್ಣ ವೃತ್ತಗಳಲ್ಲಿ ಆಲೋಚನೆಯನ್ನು ಮುಗಿಸುವದು ಅಸಾಧ್ಯವಾಗುತ್ತದೆ. ಇದರಿಂದ ಅಂಥ ವೃತ್ತಗಳು ಕನ್ನಡದಲ್ಲಿ ಕಡಿಮೆ. ಆದಕಾರಣ ಮೊದಲಿನ ೬ ಛಂದಸ್ಸುಗಳನ್ನು ಹೇಳಿಲ್ಲ; ಮತ್ತು ಮುಂದಿನ ಛಂದಸ್ಸುಗಳಲ್ಲಿರುವ ಪ್ರಖ್ಯಾತ ವೃತ್ತಗಳನ್ನು ಮಾತ್ರ ಹೇಳಿರುತ್ತೇವೆ.

ಏಳು ಅಕ್ಷರಗಳ ಚರಣವುಳ್ಳ ಉಷ್ಣಿಕ್ ಛಂದಸ್ಸು.

೧ ವಿಭೂತಿವೃತ್ತಂ. ೧.

**ರಂ ಜ ಗಂ ವಿಭೂತಿಯ್ಕೆ.**

ಉದಾಹರಣಗಳು:

(ಧರ್ಮಪರೀಕ್ಷೆ.)

**ಆವ ದೇಶ ನಿಮ್ಮದಿಂ- । ನಾವಶಾಸ್ತ್ರ ಬಲ್ಲಿರೈ, ॥**
**ದಾವ ವಿದ್ಯೆ ಬರ್ಪುದೈ, । ನೀವು ಪೇಳ ಬೇಗದಿಂ. ॥ ೧ ॥**

೨ ಚಿತ್ರಂವೃತ್ತಂ. ೨.

**ಚಿತ್ರಂವೃತ್ತಂ ಮ ಭ ಗಂ. ।**

ಉದಾಹರಣ:

(ನೀತಿ.)

**ಶೂರರ್ ವ್ಯಾಘ್ರಾದಿಗಳಂ ।**
**ಹೋರಾಡಲ್ಕುಂಟಿಳೆಯೊಳ್ ॥**
**ಮಾರಾಹಂಕಾರಹರರ್ ।**
**ಧಾರಿರ್ಪರ್ ದುರ್ಲಭರೈ? ॥ ೨ ॥**

೩ ಸುಲಭವೃತ್ತಂ. ೩.

ನ ನ ಗ ಮೆ ಸುಲಭಂ. |

ಉದಾಹರಣ:

(ನೀತಿ.)

ವಿಲಸಿತಧನವೇ | ಚಲುವಿಕೆ ಸುಗುಣಂ ||
ಕುಲಘನತೆಗಳುಂ | ಬಲಸುಮತಿಗಳುಂ. || ೩ ||

ಎಂಟು ಅಕ್ಷರಗಳ ಚರಣದ ಅನುಷ್ಟುಪ್ ಛಂದಸ್ಸು.

೪ ವಿದ್ಯುನ್ಮಾಲಾವೃತ್ತಂ. ೧.

ವೇದಚ್ಛಿನ್ನಂ ವಿದ್ಯುನ್ಮಾಲಾ |
ಪಾದಕ್ಕಿರ್ಕುಂ ಮಂ ಮಂ ಗಂ ಗಂ. ||

ಉದಾಹರಣ:

(ನೀತಿ.)

ಆದಾರಿದ್ರ್ಯಪ್ರಾಪ್ತಂಗೌದಾರ್ಯ |
ಪ್ರಾದುರ್ಭಾವಂ ತಾನಾಗಿರ್ದೇಂ? ||
ಆದಂ ಚಲ್ವಂ ಷಂಡಂ ಮುಂದೇಂ? |
ಸಾಧನ್ಯಂ ಲುಬ್ಧಂಗೈದಿರ್ದೇಂ? || ೪ ||

೫ ಚಿತ್ರಪದವೃತ್ತಂ. ೨.

ಚಿತ್ರಪದಂ ಭ ಭ ಗಂ ಗಂ. |

ಉದಾಹರಣ:

(ನೀತಿ.)

ಶೂರತನಂ ಕ್ಷಮೆಯಿಂದಂ |
ಧೀರತನಂ ನಯದಿಂದಂ ||

ಚಾರುತೆ ಸದ್ಗುಣದಿಂದಂ।
ತೋರುವದೈ ಬಲು ಚೆಂದಂ. ॥ ೫ ॥

೬ ಮಾಣವಕವೃತ್ತಂ. ೩.

ಮಾಣವಕಂ ಭಂ ತ ಲ ಗಂ.।

ಉದಾಹರಣ:

(ನೀತಿ.)

ವೈರಿಯೊಳಂ ನ್ಯಾಯುವ ನೀಂ।
ತೋರಡಿಯುಂ ಸತ್ಪಥದೊಳ್॥
ಊರೊಲಿಸೈ ಸದ್ಗುರುವಂ।
ಮೀರದಿರೈ ಮಾನ್ಯರನು. ॥ ೬ ॥

ಒಂಬತ್ತು ಅಕ್ಷರಗಳ ಚರಣದ ಬೃಹತೀಛಂದಸ್ಸು.

೭ ಉತ್ಸುಕವೃತ್ತಂ. ೧.

ಭಂ ಭ ರ ವೊಪ್ಪಿರಲುತ್ಸುಕಂ.।

ಉದಾಹರಣ:

(ನೀತಿ.)

ಘೋರವನಂ ಪುರಮಪ್ಪುದೈ।
ಕ್ರೂರಜನರ್ ಸುಜನರ್ಕಳು॥
ಧಾರುಣಿ ಕಾಂಚನಪೂರಿತಂ।
ಮೀರಿದ ಪೂರ್ವದ ಪುಣ್ಯದಿಂ. ॥ ೭ ॥

೮ ಭದ್ರಿಕಾವೃತ್ತಂ. ೨.

ರಂ ನ ರಂ ಗಳಿರೆ ಭದ್ರಿಕೆ.।

ಉದಾಹರಣ:

(ನೀತಿ.)

ಧಾನ್ಯವಂ ಧನಗುರೂಕ್ತಿಯಂ |
ಮಾನ್ಯರೌಷಧವ ಧರ್ಮಮಂ, ||
ಮಾನ್ಯರೀತಿಯೊಳೆ ಕೊಂಬುದೈ |
ಅನ್ಯಥಾತ್ವದೊಳೆ ಕಂಟಕಂ. || ೮ ||

೯ ಉದಯವೃತ್ತಂ. ೩.

ಭಂ ಜ ಸ ಮಿದಪ್ಪುದುದಯಂ. |

ಉದಾಹರಣ:

(ನೀತಿ.)

ವಿದ್ಯದಿನಲಂಕೃತನುಮಂ | ಸದ್ಯ ಬಿಡು ದುರ್ಜನನ ನೀಂ ||
ಹೃದ್ಯಮಣಿಭೂಷಿತಫಣಿ | ಪದ್ಯೆಯಲಿ ಬಂದೊಡೊಳಿತೇ?
|| ೯ ||

ಪತ್ತು ಅಕ್ಷರಗಳ ಪಾದವುಳ್ಳ ಪಂಕ್ತಿಚ್ಛಂದಸ್ಸು.

೧೦ ಕಾಮದಾವೃತ್ತಂ. ೧.

ಬಾಣಮಿಶ್ರಮಂ ಕಾಮದಾಭಿಧಂ |
ಶ್ರೇಣಿಗೊಂಡಿರಲ್ ರಂ ಯ ಜಂ ಗ ಮುಂ. ||

ಉದಾಹರಣ:

(ಉತ್ತರರಾಮಚರಿತ್ರ.)

ಈತನೇ ಮಹಾಬಾಹುವಂಜನಾ |
ಪ್ರೀತಿವರ್ಧನಂ ದೈತ್ಯಮರ್ದನಂ. ||

ಸೀತೆ, ಧನ್ಯರಾವೀಜಗತ್ತು ಮೋ- ||
ಣೀತನಾ ಮಹಾಮೋಘಶಕ್ತಿಯಿಂ. || ೧೦ ||

೧೧ ಪಣವಕವೃತ್ತಂ. ೨.

ಐದಲ್ಕಪ್ಪುದು ಪಣವಂ ವೃತ್ತಂ |
ಭೇದಂ ಬಾಣದೆ ಮ ನ ಯಂ ಗಳ್ ಗಂ. ||

ಉದಾಹರಣ:

(ವಸಂತರ್ತುವರ್ಣನೆ.)

ಮಾರಂಗಂ ಮಧುರಚಿತಂ ಮುಕ್ತಾ |
ಹಾರಾಂಚನ್ಮುಕುಟಶಿಖೈಕಾಲಂ ||
ಕಾರಕ್ಕೇ ಸರಿಯಹುದಲ್ತೇ? ಚೂ- |
ತಾರಾಜತ್ಸುಮಕಲಿಕಾಗುಚ್ಛಂ. || ೧೧ ||

೧೨ ಮಂದಸಮೀರವೃತ್ತಂ. ೩. (ಮಂದಾನಿಲವೃತ್ತಂ.)

ಬಾಣವಿರಾಮಂ ಭಂ ಮ ಸ ಗಂ ಗಳ್ |
ಕಾಣಲು ವೃತ್ತಂ ಮಂದಸಮೀರಂ. ||

ಉದಾಹರಣ:

(ನೀತಿ.)

ಪೌರುಷವಂ ತಾಂ ಮಾಡದೆ ತನ್ನಂ |
ಸೇರಿದ ಸಂಪದ್ಭೋಗದೊಳೇನೈ? ||
ಚಾರು ತೃಣಂ ದೈವೋದಯದಿಂದೆ |
ತೋರಲು ವೃದ್ಧೋಕ್ಷಂ ತಿನದೇನೈ? || ೧೨ ||

೧೩ ಮತ್ತಾವೃತ್ತಂ. ೪.

ಮತ್ತಂ ವೇದಚ್ಯುತಿ ಮ ಭ ಸಂ ಗಂ.

ಉದಾಹರಣ:

(ನೀತಿ.)

ಶುದ್ಧಂ ಮುಕ್ತಾಫಲಮವಿರುದ್ಧಂ |
ಬದ್ಧಂ ತಾನಾದುದದು ಸುವೃತ್ತಂ ||
ಪೊದ್ದಲ್ ಛಿದ್ರಂ ವಿಧಿವಶದಿಂ ತಾ- |
ನಿದ್ದುಂ ವ್ಯರ್ಥಂ ಸುಗುಣಸಮೂಹಂ. || ೧೩ ||

೧೪ ಚಿತ್ರಪದವೃತ್ತಂ. ೫.

ಚಿತ್ರಪದಂ ಯತಿ ನಾಲ್ಕರೊಳು |
ಭ-ತ್ರಿತಯಂ ಗುರುವಂತ್ಯದೊಳು. ||

ಉದಾಹರಣ:

(ನೀತಿ.)

ಪಾಪವ ಗಂಗೆ ಕುರಂಗಧರಂ |
ತಾಪವ ದೈನ್ಯವ ಕಲ್ಪಕುಜಂ ||
ಲೋಪಿಕುಮುತ್ತಮಸಂಗಮವಾ |
ಪಾಪವ ತಾಪವ ದೈನ್ಯಮುಮಂ. || ೧೪ ||

ಹನ್ನೊಂದಕ್ಷರಗಳ ಚರಣದ ತ್ರಿಷ್ಟುಪ್ ಛಂದಸ್ಸು.

೧೫ ಶುದ್ಧಕಾಮದಾವೃತ್ತಂ. ೧.

ವಿರತಿಯಾರರಿಂ ನಂ ರ ರಂ ಲ ಗಂ |
ಬರಲದಪ್ಪುದೈ ಶುದ್ಧಕಾಮದಂ. ||

ಉದಾಹರಣ:

(ಗಂಗಾಸ್ತುತಿ.)

ದುರಿತಕೋಟಿಯಂ ಕಾಣುತಾಗಳೇ |
ತರಿವ ನಿನ್ನ ಕೀರ್ತ್ಯರ್ಗಳಿ ಮಂಜುಳೇ ||
ಸರಿಕೆಳಂದಿಯುಂನಾಯುಲಂದದಿಂ |
ಹೊರಟು ಸತ್ಯಲೋಕಾಂತರಾಳದಿಂ. || ೧೫ ||

ಸುರಪುರಕ್ಕೆ ಬಂದಲ್ಲಿ ದೇವತಾ |
ತರುಣಿಯರ್ಕಳಂ ಕಂಡು ಬಿಟ್ಟು ತಾಂ ||
ಧರೆಯೊಳಾಯ್ತು ಪಾತಾಳಕ್ಕೈದಿಯುಂ |
ದೊರೆಯುದಾಗೆ ದಿಗ್ದೇಶದಲ್ಲಿಯುಂ. || ೧೬ ||

೧೬ ಇಂದ್ರವಜ್ರಾವೃತ್ತಂ. ೨.

ತಂ ತಂ ಜ ಗಂ ಗಂ ಬರಲಿಂದ್ರವಜ್ರಂ. ||

ಉದಾಹರಣ:

(ಉತ್ತರರಾಮಚರಿತ್ರಂ.)

ನಿನ್ನಿಂದೆ ಲೋಕಂಗಳು ಪಾವನಂಗಳ್ |
ನಿನ್ನೊಳ್ಳನಂ ದೋಷವನಿಟ್ಟುದಯ್ಯೋ ||
ನಿನ್ನಿಂ ಸನಾಥಂ ಭುವನತ್ರಯಂ ನೀಂ |
ಬನ್ನಂಬಡಲ್ ನಿಂತೆಯನಾಥೆಯಾಗಿ. || ೧೭ ||

ಆದೇವಿಯಿಂ ಶೂನ್ಯವಿದಾಗಿ ಲೋಕಂ |
ವೈದೋರ್ಪುದೀರಾರನೆಯುಬ್ಧವಿಾಗಳ್ ||
ವೈದೇಹಿಯೆಂಬೀ ಹೆಸರುಂ ನಿರಸ್ತಂ |
ವೈದಾಳ್ದು ಬಾಳಲ್ಲವೆ? ರಾಮನಿನ್ನುಂ. || ೧೮ ||

೧೭ ಉಪೇಂದ್ರವಜ್ರಾವೃತ್ತಂ. ೩.

ಜ ತಂ ಜ ಗ-ದ್ವಂದ್ವಮುಪೇಂದ್ರವಜ್ರಂ. |

ಉದಾಹರಣ:

(ನೀತಿ.)

ಅವೊಳ್ಳಿತಲ್ತೆಲ್ಲವು ಪ್ರತ್ನಮೆಂದೇ |
ನವೀನಮೆಂದೇ ಕೆಡಕಾಗದೆಲ್ಲಂ ||
ಪ್ರವೀಣರೊಂದಂ ನಡೆ ನೋಡಿಕೊಂಬರ್ |
ವಿವೇಕಹೀನಂ ಪರವಾಕ್-ಪ್ರಮಾಣಂ. || ೧೮ ||

೧೮ ರಥೋದ್ಧತಾವೃತ್ತಂ. ೪.

ರಂ ನ ರಂ ಲ ಗ ಮಿರಲ್ರಥೋದ್ಧತಂ |
ಛಿನ್ನಮಪ್ಪುದು ಹಯಸ್ಥಳಕ್ಕೆ ತಾಂ. ||



ಉದಾಹರಣ:

(ರಾಜಶೇಖರ ೧೧ ಆ.)

ಚಂದ್ರಿಕಾಜಲಧಿ ತೀವಿ ಲೋಕಮಂ |
ಸಾಂದ್ರಮಾಗಿ ನೆಗೆದುರ್ವೆ ಲೀಲೆಯಿಂ ||
ಚಂದ್ರಮಧ್ಯ-ವಟಪತ್ರದಲ್ಲಿ ಲ- |
ಕ್ಷ್ಮೀಂದ್ರನಿರ್ಪನೆನೆ ಲಕ್ಷ್ಮಮೊಪ್ಪುಗುಂ.

೧೯ ಸ್ವಾಗತವೃತ್ತಂ. ೫.

ಆಗಿರಲ್ ವಿರಮಣಂ ಹಯದಲ್ಲಿ |
ಸ್ವಾಗತಂ ರ ನ ಭ ಗಂ ಗಮಿರಲ್ಕೆ. ||



ಉದಾಹರಣ:

(ನೀತಿ.)

ದಾನದಿಂ ಕರವು, ಕಂಕಣದಿಂದೇಂ? ।
ಸ್ನಾನದಿಂ ಶುಚಿಯು, ಚಂದನದಿಂದೇಂ? ॥
ಮಾನದಿಂ ತ್ರಿಪ್ರುತಿ, ಭೋಜನದಿಂದೇಂ? ।
ಜ್ಞಾನದಿಂ ಮುಕುತಿ, ಮುಂಡನದಿಂದೇಂ? ॥ ೨೧

೨೦ ಶಾಲಿನೀವೃತ್ತಂ. ೬.

ಮಂ ತಂ ತಂ ಗಂ ಗಂ ಶ್ರುತಿಸ್ಥಂ ವಿರಾಮಂ ।
ತಾಂ ತೋರಲ್ಕಾ ಶಾಲಿನೀವೃತ್ತಮಕ್ಕುಂ. ॥

ಉದಾಹರಣ:

(ಉತ್ತರರಾಮಚರಿತ್ರಂ.)

ಏ ಮುಗ್ಧೇ ಹೃದ್ಯಂಗಳಲ್ತೇ ವಚಂಗಳ್ ।
ಪ್ರೇಮಾರ್ದ್ರಂಗಳ್ ಶೋಕದಿಂ ದಾರುಣಂಗಳ್ ॥
ವ್ಯಾಮಿಶ್ರಂಗಳ್ ನಂಜಿನಿಂ ಕ್ಷೌದ್ರಧಾರಾ ।
ಸ್ತೋಮಂಗಳ್ಪೋಳ್ದಪ್ಪುವೇ ನಿನ್ನ ಮೇಲೆ? ॥ ೨೨

೨೧ ದೋಧಕವೃತ್ತಂ. ೭.

ಭ-ತ್ರಯ ಗಂ ಗ ಮೆ ದೋಧಕವೃತ್ತಂ. ।

ಉದಾಹರಣ:

(ನೀತಿ.)

ದೈವದೆ ಮಂತ್ರದೊಳೌಷಧದಲ್ಲಿ ।
ಭೂವಿಬುಧಾಳಿಗುರೂತ್ತಮರಲ್ಲಿ ॥

ಆವ ಮನುಷ್ಯನ ಮಾನಸದಲ್ಲಿ |
ಭಾವನೆಯೆಂತಿಹುದಂತೆ ಫಲಂಗಳ್". || ೨೩ ||

೨೨ ಭ್ರಮರವಿಲಸಿತಾವೃತ್ತಂ. ೮.

ವೇದಚ್ಛಿನ್ನಂ ಭ್ರಮರವಿಲಸಿತಾ |
ಪಾದಂ ಸಾಲ್ಗೊಂಡಿರೆ ಮ ಭ ನ ಲ ಗಂ. ||

ಉದಾಹರಣ:

(ನೀತಿ.)

ಶೀಲಂ, ರೂಪಂ, ಮಧುರತೆ, ಸುಕುಲಂ, |
ಮೇಲೌದಾರ್ಯಂ, ಕ್ಷಮೆ, ವಿಮಲತೆಯುಂ ||
ಶ್ರೀಲೋಭಂ ತಾಂ ನರನನು ತೊರೆದಾ |
ಕಾಲಕ್ಕೆಲ್ಲಂ ವಿಫಲಮೆನಿಸುಗುಂ. || ೨೪ ||

ಹನ್ನೆರಡಕ್ಷರಗಳ ಪಾದವುಳ್ಳ ಜಗತೀಛಂದಸ್ಸು.

೨೩ ವಂಶಸ್ಥವೃತ್ತಂ. ೧.

ಬರಲ್ಕೆ ವಂಶಸ್ಥಪದಂ ಜತಂ ಜರಂ. ||

ಉದಾಹರಣ:

(ಉತ್ತರರಾಮಚರಿತ್ರಂ.)

ಅತಿಪ್ರಿಯಂ ಮಕ್ಕಳೊಳೈವರಲ್ಲಿಯುಂ |
ಕ್ಷಿತೀಶ್ವರಂಗಿರ್ದನು ರಾವಣಾಂತಕಂ ||
ಅತಿಪ್ರಿಯಳ್ ಸೀತೆ ವಧೂಚತುಷ್ಕದೆ |
ಪ್ರತೀತೆ ತತ್ಪ್ರೀತಿಯ ಪುತ್ರಿ ಶಾಂತೆವೊಲ್. || ೨೫ ||

### ೨೪ ಇಂದ್ರವಂಶಾವೃತ್ತಂ. ೨.

ಇಂತಿಂದ್ರವಂಶಾವರವೃತ್ತಲಕ್ಷಣಂ |
ತಂ ತಂ ಜ ರಂ ಗಳ್ ಯತಿಪಂಚಮಸ್ಥಿತಂ. ||

ಉದಾಹರಣ:

(ನೀತಿ.)

ಬಾಗಿರ್ಕುಮೆಂದುಂ ಫಲಪುಷ್ಪದಿಂ ದ್ರುಮಂ, |
ಮೇಘಂ ವಿನಮ್ರಂ ಪೊಸನೀರ್ಗಳೇಳ್ಗೆಯಿಂ ||
ಕೈಗಣ್ಮೆ ಸೊಕ್ಕರ್ ಸುಜನರ್ ಸಮೃದ್ಧಿಗಳ್, |
ಹೀಗೈ ಸ್ವಭಾವಂ ಭುವನೋಪಕರ್ತರಾ. || ೨೬ ||

### ೨೫ ಭುಜಂಗಪ್ರಯಾತಂ. ೩.

ಚತುರ್-ಯಂಗಳಿಂದಾಭುಜಂಗಪ್ರಯಾತಂ.

ಉದಾಹರಣ:

(ಉತ್ತರರಾಮಚರಿತ್ರಂ.)

ಜನಸ್ಥಾನಮಂ ನೋಡೆ ಹಿಂದಾದ ಕೃತ್ಯಂ |
ಮನಸ್ಸಿಂಗೆ ಕಣ್ಮುಂದೆ ಕಟ್ಟಿರ್ಪುದೀಗಳ್. ||
ಅನೇಕಾಸುರವ್ಯೂಹಮಂ ಕೂಡಿಕೊಂಡಿ- |
ರ್ದನಂದಿಲ್ಲಿ ನಿತ್ಯಂ ಖರಂ ಮುಖ್ಯ ದೈತ್ಯಂ. || ೨೭ ||

### ೨೬ ದ್ರುತವಿಲಂಬಿತವೃತ್ತಂ. ೪.

ದ್ರುತವಿಲಂಬಿತಮೈದೆ ನ ಭಂ ಭ ರಂ. |

ಉದಾಹರಣ:

(ವಸಂತರ್ತುವರ್ಣನಂ.)

ಪೊಸತಿದಬ್ಜರಿಯೆನ್ನ ಮುಗುಳ್ ಸುಕ- |
ಕ[illegible]ಶಕಮುಸ್ಥಿಮಯುಕ್ಕಸುಗಂಧಕೀ ||

ದಶನಕೋರಗೆಯೆಂದಪರೆಂದು ತಾಂ ।
ಕುಸುಮಿತಂ ನಗುವಂತಿರೆ ಮಲ್ಲಿಕೆ. ॥ ೨೮ ॥

೨೭ ತೋಟಕವೃತ್ತಂ. ೫.

ಇರೆ ತೋಟಕಮಾರೆರಡಾ ಸ ಗಣಂ. ।

ಉದಾಹರಣ:

(ವಸಂತರ್ತುವರ್ಣನಂ.)

ಮದನಂ ಮಧುಪಾತಿಮದೋಪಶಮಾ- ।
ಪಥಮಾತ್ರಿಗಳಂ ಸಮೆದಂತಿರೆ ತೋ- ॥
ರಿದ ಗಂಧಫಲೀನಿಕರಂಗಳನಾಂ- ।
ತುದು ತೋಟಕಮಂದವು ಚಂಪಕವು. ॥ ೨೯ ॥

೨೮ ಸ್ರಗ್ವಿಣೀವೃತ್ತಂ. ೬.

ತೋರೆ ನಾಲ್ಕೀ ರ ಕಾರಂಗಳಾಸ್ರಗ್ವಿಣಿ. ॥

ಉದಾಹರಣ:

(ನೀತಿ.)

ಪಾಲಿಸೈ ಕೀರ್ತಿಯಂ, ತೋರು ಕಾರುಣ್ಯಮಂ ।
ಬಾಲವೃದ್ಧರ್ಕಳೊಳ್, ದುಃಖಿತಪ್ರಾಣಿಯೊಳ್ ॥
ತಾಳು ನೀಂ ತಾಳ್ಮೆಯುಂ ಪಾಪಸಂಕಲ್ಪದೊಳ್ ।
ಬೀಳದಿರ್. ಛೇದಿಸೈ ತೃಷ್ಣೆಯಂ, ಸೊಕ್ಕುಮಂ. ॥ ೩೦ ॥

೨೯ ದ್ರುತಪದ (ಪ್ರಿಯಂವದಾ)ವೃತ್ತಂ. ೭.

ದ್ರುತಪದಂ ನ ಭ ಜ ರ್ಯು ಬರಲಕ್ಕುಂ. ।

ಉದಾಹರಣ:

(ನೀತಿ.)

ಪರರರಿವರ್ ಸ್ವಜನರ್ಕೆ ಇವರೆಂದು ।
ಸ್ಮರಿಸುವರ್ ಪರಿಕಿಸಲ್ ಮತಿಮಂದರ್. ॥
ಅರಿಯರೀಪರಿಗಳಂ ಸದುದಾರರ್ ।
ಧರಣಿಯೇ ಬಳಗವೈ ಸುಜನರ್ಗೆ. ॥ ೩೧ ॥

೩೦ ತಾಮರಸ (ಲಲಿತಪದ)ವೃತ್ತಂ. ೮.

ಲಲಿತಪದಂ ನ ಜ ಜಂ ಯಮಿರಲ್ಕೆ, ।
ತಿಳಿ ಯತಿಸಪ್ತಮವರ್ಣಕಿರಲ್ಕೆ. ॥

ಉದಾಹರಣ:

(ನೀತಿ.)

ಹಳುವದ ಬೆಟ್ಟದ ದುರ್ಗಮಮಾರ್ಗ- ।
ಸ್ಥಳದೆ ವನೇಚರರಿಂದೆಡೆಯಾಟಂ ॥
ಒಳಿತು ಸುರೇಂದ್ರನಿವಾಸದೊಳಿರ್ದುಂ ।
ತಿಳಿದಿರು ಮೂರ್ಖರ ಸಂಗತಿ ಬೇಡೈ. ॥ ೩೨ ॥

೩೧ ನಿರುಪಮವೃತ್ತಂ. ೯.

ನಿರುಪಮಂ ನ ಭ ಜ ರಂ ದಿಶಾಯತಿ. ।

ಉದಾಹರಣ:

(ರಾಜಶೇಖರ.)

ಭಗಣಮೌಕ್ತಿಕಧರಾಭ್ರಕೃಷ್ಣನಂ ।
ದಗಿಯಲಿಂದ್ರಹರಿದದ್ರಿಭಾಂಡದಿಂ ॥
ತೆಗೆದು ತಾಳ್ದ ನವನೀತಪಿಂಡಮಂ ।
ಬಗೆಯೆ ಪೋಲ್ತುದಮೃತಾಂಶುಮಂಡಲಂ. ॥ ೩೩ ॥

ಹದಿಮೂರು ಅಕ್ಷರಗಳ ಪಾದದ ಅತಿಜಗತೀಛಂದಸ್ಸು.

೩೨ ಪ್ರಹರ್ಷಿಣೀವೃತ್ತಂ. ೧.

ತ್ರಿಚ್ಛಿನ್ನಂ ಮ ನ ಜ ರ ಗಂ ಪ್ರಹರ್ಷಿಣೀಕಂ.।

ಉದಾಹರಣ:

(ನೀತಿ.)

ತಾರಾಪಂ ಕುಮುದವನಂಗಳಂ, ದಿನೇಶಂ।
ನೀರೇಜವ್ರಜವ ವಿಕಾಸವಂ ನೆಗಳ್ವರ್,॥
ನೀರಂ ತಾಂ ಕುಡುವುದು ಬೇಡದೇ ಪಯೋದಂ।
ಸೇರಿರ್ಪರ್ಪರಹಿತದಲ್ಲಿ ತಾವೆ ಸಂತರ್. ॥ ೩೪ ॥

೩೩ ಮತ್ತಮಯೂರಂ. ೨.

ವೇದಚ್ಛಿನ್ನಂ ವೃತ್ತಮದೇ ಮತ್ತಮಯೂರಂ।
ಪಾದಸ್ಥಂಗಳ್ ಮಂ ತ ಯ ಸಂ ಗಂ ಕ್ರಮದಿಂದೆ.॥

ಉದಾಹರಣ:

(ನೀತಿ.)

ಮೇಲುಂ ವಿದ್ಯಾಬುದ್ಧಿ ಕುಲಂ ಭೂಪತಿಸೇವೆ।
ಶೀಲಂ ರೂಪಂ ಬೀರುವದಿಲ್ಲೈ ಫಲವನ್ನು,॥
ಮೂಲಂ ಭಾಗ್ಯಂ ಪೂರ್ವದೆ ತಾಂ ಮಾಡಿದ ಪುಣ್ಯಂ।
ಕಾಲಕ್ಕಕ್ಕಂ ಸತ್ಫಲಿತಂ ಭೂರುಹದಂತೇ. ॥ ೩೫ ॥

೩೪ ಮಂಜುಭಾಷಿಣೀವೃತ್ತಂ. ೩.

ಯತಿ ಷಷ್ಠದಲ್ಲಿ ನಿಲೆ ಮಂಜುಭಾಷಿಣಿ।
ಪ್ರತಿಪಾದದಲ್ಲಿ ಬರೆ ಸಂ ಜ ಸಂ ಜ ಗಂ.॥

ಉದಾಹರಣ:

(ಉತ್ತರರಾಮಚರಿತ್ರಂ.)

ಇವನಾರೊ ಪುತ್ರೆ? ಹರಿನೀಲಕಾಂತಿಯು |
ನವಗೀವನ್ಸೈ ಪುಲಕಮುಂ ಸ್ವಘೋಷದಿಂ ||
ನವನೀಲನೀರದಗಭೀರಗರ್ಜಿತಂ
ಜವದಿಂ ಕದಂಬಕೆ ಮುಗುಳ್ಗಳೀವವೊಲ್. || ೧೬ ||

೧೫ ವಿಭಾವರೀವೃತ್ತಂ. ೪.

ನ ಭ ಜ ಜಂ ಗ ಮಿರಲಾಯ್ತು ವಿಭಾವರಿ. ||

ಉದಾಹರಣ:

(ನೀತಿ.)

ಸರಸಗಾಯಕನಟರ್ ಪಿಟರಲ್ತು ಮೇಣ್ |
ಪೆರರ ದೋಷವನೆ ತೋರುವರಲ್ತೈ ||
ಅರಸನಾಲಯದೊಳರ್ಪೊಡೆ ನಾವದಾರ್? |
ಉರುಕುಚಾನಮಿತಕಾಂತೆಯರಲ್ತೆ ಲೇ. || ೧೭ ||

ಪದಿನಾಲ್ಕು ಅಕ್ಷರಗಳ ಪಾದವುಳ್ಳ ಶಕ್ವರೀಛಂದಸ್ಸು.

೧೬ ವಸಂತತಿಲಕವೃತ್ತಂ. ೧.

ಉಕ್ತಂ ವಸಂತತಿಲಕಂ ತ ಭ ಜಂ ಜ ಗಂ ಗಂ. ||

ಉದಾಹರಣ:

(ಉತ್ತರರಾಮಚರಿತ್ರಂ.)

ಬಂದೊಂದೆ ರಾಜಿಸುತಿರಲ್ಕೆಳವೊಗ್ಗೆವಲ್ಗಳ್ |
ಮಂದಸ್ಮಿತಂ ರುದಿತಮುಣ್ಮಿರೆ ನಿರ್ನಿಮಿತ್ತಂ ||

ಸಂದ ಪ್ರಸಂಗದ ತೊದಲ್ನುಡಿ ಮುದ್ದುವರ್ಪಿ ।
ಕಂದಮ್ಮ ಕಟ್ಟಿಹುದೆ ಕಣ್ಗೆ ತವಾನನಾಬ್ಜಂ. ॥ ೩೮ ॥

೩೭ ಪ್ರಹರಣಕಲಿಕಾವೃತ್ತಂ. ೨.

ಪ್ರಹರಣಕಲಿಕಂ ನ ನ ಭ ನ ಲ ಗ ದಿಂ. ॥

ಉದಾಹರಣ:

(ವಸಂತವರ್ಣನಂ.)

ಸ್ಮರನು ವಿರಹಿಯಂ ಪ್ರಹರಿಸೆ, ಹೃದಯಂ- ।
ಗೊರೆದು ರುಧಿರಮಂ ಪೊರಡಿಸುತದರೊಳ್ ॥
ಪೊರಳಿದ ಮದನಪ್ರಹರಣಕಲಿಕಾ ।
ಶರತತಿಗೊರೆಪಾಟಳಮುಕುಳಕುಳಂ. ॥ ೩೯ ॥

೩೮ ಅಲೋಲಾವೃತ್ತಂ. ೩.

ಸಪ್ತಚ್ಛಿನ್ನಮಲೋಲಂ ಮಂ ಸಂ ಮಂ ಭ ಗ-ಯುಗ್ಮಂ. ॥

ಉದಾಹರಣ:

(ವಸಂತವರ್ಣನೆ.)

ಮಾರಂ ರೂಪವಿಹೀನಂ ತಾನೆಂದೇಳಪುದೆನ್ನಂ ।
ತೋರಲ್ಪೇಳ್ಕು ವಿಯೋಗಿವ್ರಾತಕ್ಕೆಂದುರೆ ಚೈತ್ರಾ- ॥
ಕಾರಂ-ದಾಳ್ದನೆಲಕೋರ್ಪಶ್ವಾಸಂ ನವಪತ್ರಾಂ- ।
ಕೂರಂ ಕೂರಲಗುಚ್ಛೋಃ ಸಂಘೋಷಂ ಪಿಕಶಬ್ದಂ. ॥ ೪೦ ॥

೩೯ ವನಮಯೂರಂ. ೪.

ಬಂದಿರೆ ಭ ಜಂ ಸ ನ ಗ ಗಂ ವನಮಯೂರಂ. ।

ಉದಾಹರಣ:

(ನೀತಿ)

ಸತ್ಯಮಿರಲೇಂ? ತಪಸಿನಿಂ, ವಿಮಲಚಿತ್ತಂ ।
ನಿತ್ಯಮಿರೆ ತೀರ್ಥದೊಳದೇಂ? ಘನಚರಿತ್ರಂ ॥
ಸ್ತುತ್ಯಮಿರೆ ಭೂಷಣದೊಳೇನಯಶಮಿರ್ದುಂ ।
ಮೃತ್ಯುವಿನೊಳೇಂ? ಧನದೊಳೇನಿರೆ ಸುವಿದ್ಯಂ. ॥ ೪೧ ॥

೪೦ ಅಸಂಬಾಧಾವೃತ್ತಂ. ೫.

ಸಪ್ತಚ್ಛಿನ್ನಂ ಮಂ ತ ನ ಸ ಗ ಗ ಮಸಂಬಾಧಂ. ॥

ಉದಾಹರಣ:

(ನೀತಿ.)

ಕಾರುಣ್ಯಾಭಾವಂ ಪರಸತಿಯರ ಮೇಲಾಸೆ ।
ಪಾರುಷ್ಯಂ ನಿತ್ಯಂ ಸ್ವಜನಸುಜನರೊಳ್ ವೈರಂ ॥
ಕ್ರೂರವ್ಯಾಪಾರಂ ಜಗಳಗಳನಿಮಿತ್ತಂಗಳ್ ।
ಸೇರಿರ್ಕುಂ ಮೈಯೊಳ್ ಜನನದೊಳೆ ದುರಾತ್ಮರ್ಗೆ. ॥ ೪೨ ॥

೪೧ ಮಧ್ಯಕ್ಷಾಮಾವೃತ್ತಂ. ೬.

ಮಧ್ಯಕ್ಷಾಮಂ ಮ ಭ ನ ಯ ಗ ಗ ಮುಷ್ಟಚ್ಛಿನ್ನಂ. ।

ಉದಾಹರಣ:

(ನೀತಿ.)

ದೇವಕಾರ್ಯರ್ಬಡಿಗಿವಿಡಿದು ಗೋಪಾಲಂಬೊಲ್ ।
ದಾವಂ ಪಾಲ್ಯಂ ನರನವನಿಗೆ ಧೀಯನ್ನೀವರ್ ॥
ದೇವಕರ್ಗೊಲ್ಲರ್ಮುನಿದರಿಗಳವೊಲ್ಕ್ಕೋಲಿಂದಂ ।
ದಾವಂ ವಧ್ಯಂ ಕುಮತಿಯನವಗೀವರ್ಮುನ್ನಂ. ॥ ೪೩ ॥

ಹದಿನೈದಕ್ಷರಗಳ ಪಾದದ ಅತಿಶಕ್ವರೀಚ್ಛಂದಸ್ಸು.

೪೨ ಮಾಲಿನೀವೃತ್ತಂ. ೧.

**ವಸುಯತಿ ನ ಯುಗಂ ಮಂ ಯ-ದ್ವಯಂ ಮಾಲಿನೀಕಂ. ||**

ಉದಾಹರಣ:

(ವಸಂತವರ್ಣನಂ.)

**ಸೆಳೆಯೆ ಮಲಯವಾತಂ ಸೌರಭಶ್ರೀಸಮೇತಂ |**
**ಪೊಳೆಯೆ ರಸರಸಾಲಂ ಪಲ್ಲವಾಂಕೂರಜಾಲಂ ||**
**ಮೊಳೆಯೆ ತಳದುರ್ದಾಗಲ್ ಮಾಗಿ ಪುಷ್ಪಂಗಳಾಗಲ್ |**
**ಸುಳಿಯಲಳ ವನಾಂತಂ ಸಾರಿದಂ ಶ್ರೀವಸಂತಂ. || ೪೪ ||**

೪೩ ಮಣಿಗಣವೃತ್ತಂ. ೨.

**ವಸುಯತಿ ನ-ಶರಧಿ ಸ ಮಿರೆ ಮಣಿಗಣಂ. |**

ಉದಾಹರಣ:

(ನೀತಿ.)

**ಖರಕರಹಿಮಕರರಿಗೆ ಗ್ರಹಮಥನಂ |**
**ಕರಿಗುರಗನಿಗೆ ಬಲಿದ ಸೆರೆಯನಿಶಂ ||**
**ಇರುವದು ಮತಿಯುತರಿಗೆ ಬಡತನವು |**
**ಪರಿಕಿಸೆ ವಿಧಿಯ ಮಹಿಮೆ ಬಲಿದಹುದೈ. || ೪೫ ||**

೪೪ ವಿಚಿತ್ರಲಲಿತಾವೃತ್ತಂ. ೩.

**ದಶಯತಿ ವಿಚಿತ್ರಲಲಿತಂ ನ ಸ ನ ಭಂ ಯಂ. ||**

ಉದಾಹರಣ:

(ನೀತಿ.)

ಜರೆಯಲಿ ಸುನೀತಿನಿಪುಣರ್ ಸ್ತುತಿಸಲ್ಕೆ ಮೇಣ್ ।
ಸಿರಿ ಬರಲಿ ಬಾರದಿರೆ ಪೋಗಲಿ ಯಥೇಷ್ಟಂ ॥
ಬರಲಿ ಮೃತಿಯಿಂದೆಯಥವಾ ಯುಗದ ಮೇಲೇ ।
ಸರಿಸನಡಿಯಂ ಸುಮತಿ ನೀತಿಪಥದಿಂದ. ॥ ೪೭ ॥

೪೫ ಚಾಮರಂ. ೪.

ಚಾಮರಾಖ್ಯವೃತ್ತಮಪ್ಪುದೈದೆ ರಂ ಜ ರಂ ಜ ರಂ. ॥

ಉದಾಹರಣ:

(ರಾಜಶೇಖರ.)

ಶಾಮಲಾಂಗವಾಗಿ ತೀವಿ ತಳ್ತಭೃಂಗವೃಂದದಿಂ ।
ಕೋಮಲಪ್ರವಾಳಶಾಖೆಯೆಂಬ ದೀರ್ಘಶುಂಡದಿಂ ॥
ವಾಮವಾಗಿ ತಾಳ್ದ ಮಾಕರಂದದಾನವಾರಿಯಿಂ ।
ಕಾಮಸಾಮಜೋಪಮಾನವಾದುದೊಂದು ಮಾಮರಂ.
॥ ೪೭ ॥

ಹದಿನಾರು ಅಕ್ಷರಗಳ ಚರಣದ ಅಷ್ಟಿಛಂದಸ್ಸು.

೪೬ ಲಲಿತಪದವೃತ್ತಂ. ೧.

ಲಲಿತಪದಯುತಿ ದಶದೆ ನ-ತ್ರಯ ಜ ಸಂ ಗಂ. ॥

ಉದಾಹರಣ:

(ನೀತಿ.)

ಇರಲು ಮತಿ ಬಲಯುತನುಮನ್ಯರನು ತಾನೇ ।
ಅರಿತನಕೆ ಬರಿಸುವದಯುಕ್ತಮತಿಕಷ್ಟಂ ॥

ಗರಳವನು ಕುಡಿವರೆ? ವಿಚಕ್ಷಣರು ವೈದ್ಯಂ ।
ಕರದೊಳಹನೆನುತೆ ಧರೆಯಲ್ಲಿಯನಿಮಿತ್ತಂ. ॥ ೪೮ ॥

೪೭ ಪಂಚಚಾಮರವೃತ್ತಂ. ೨.

ಜ ರಂ ಜ ರಂ ಜ ಗಂ ಬರಲ್ಕದಾಯ್ತು ಪಂಚಚಾಮರಂ.

ಉದಾಹರಣ:

(ನೀತಿ.)

ವ್ರತಸ್ಥನಲ್ಲಿ ದಂಭಮಂ, ಸುಬುದ್ಧಿಯಲ್ಲಿ ಜಾಡ್ಯಮಂ, ।
ಹಿತೋಕ್ತಿಯಲ್ಲಿ ದೈನ್ಯಮಂ, ಶುಚಿತ್ವದಲ್ಲಿ ಮೋಸಮಂ, ॥
ಸ್ವತಂತ್ರನಲ್ಲಿ ಗರ್ವಮಂ, ಪ್ರತಾಪಿಯಲ್ಲಿ ತೈಕ್ಷ್ಣ್ಯಮಂ ।
ಕುತರ್ಕರಿಂತು ದೋಷಮಂ ಗುಣಾಢ್ಯರಲ್ಲಿ ತೋರುವರ್.
॥ ೪೯ ॥

೪೮ ಅಶ್ವಗತಿವೃತ್ತಂ. ೩.

ಪಂಚ ಭ ಕಾರಗಳಂತ್ಯದೆ ಗಂ ಬರಲಶ್ವಗತಿ. ॥

ಉದಾಹರಣ:

(ನೀತಿ.)

ವಾರಣ-ಸೂಕರ-ಮಾಂಸವ ತಿಂಬ ಮಹಾಬಲಿಗಂ ।
ವಾರಣ-ವೈರಿಗೆ ವತ್ಸರಕೊರ್ಮೆ ರತಿಪ್ರಣಯಂ ॥
ಪಾರಿವಮುಂಬುದು ತಾಂ ಪರಲಂ ಖರ-ನೀರಸಮಂ ।
ಪಾರುವದಾವಗಮುಂ ರತಿಯುಂ ನುಡಿ ಕಾರಣಮೇಂ?
॥ ೫೦ ॥

ಹದಿನೇಳು ಅಕ್ಷರಗಳ ಚರಣದ ಅತ್ಯಷ್ಟಿಚ್ಛಂದಸ್ಸು.

೪೯ ಶಿಖರಿಣೀವೃತ್ತಂ. ೧.

ವಿರಾಮಂ ಷಷ್ಠಸ್ಥಂ ಯ ಮ ನ ಸ ಭ ಲಂ ಗಂ ಶಿಖರಿಣಿ. ॥

ಉದಾಹರಣ:

(ಉತ್ತರರಾಮಚರಿತ್ರಂ.)

ಇದಾಚಿತ್ರಂ ಪಾಪರ್ ಕನಕಮೃಗಮೆಂಬೊಂದು ನೆವದಿಂ।
ಕುದೈತ್ಯರ್ ಮಾಡಿದ್ದೀ ಬಿಡದವರ ಕೊಂದುಂ ವ್ಯಥಿಪುದು॥
ಅದಕ್ಕಣ್ಣಂ ಬೆಂಡಾಗಿ, ವಿಜನಜನಸ್ಥಾನದೊಳೆ ತಾ-।
ಳ್ದ ದುಃಖಕ್ಕಂ ಕಲ್ಲತ್ತುದು ಕರಗಿತೈ ವಜ್ರಹೃದಯಂ.
॥ ೫೧ ॥

೫೦ ಪೃಥ್ವೀವೃತ್ತಂ. ೨.

ಜ ಸಂ ಜ ಸ ಯ ಲಂ ಗಮುಂ ವಸುವಿರಾಮಕಂ ಪೃಥ್ವಿ-
ಯು. ॥

ಉದಾಹರಣ:

(ಹಿಮವರ್ಣನೆ.)

ಹಿಮಾಗಭವೆ ಗೌರಿ, ಗಂಗೆ ಸಲಿಲಾಂಗಿ, ನೇತ್ರಾಗ್ನಿ ವಾ-।
ಯು ಮಿತ್ರನೆನುತಂ ಶಿವಂ ಪೊಳಲ ಚುರ್ಚೆವ್ಯೆಗಾಸಿ ಭ-॥
ಸ್ಮಮಂ ತೊಡೆದೊಡಲ್ಗೆ ಮೇಣ್ ಗಜತರಕ್ಷು ಚರ್ಮಂ-
ಗಳಂ-।
ನುವಾಂತನೆನೆ ತಾಳ್ವರೆಂತೊ ನರರೀ ಮಹಾಶೀತಮಂ.
॥ ೫೨ ॥

೫೧ ಮಂದಾಕ್ರಾಂತಾವೃತ್ತಂ. ೩.

ಮಂದಾಕ್ರಾಂತಂ ಮ ಭ ನ ತ ತ ಗಂ ಗಂ ಚತುಃಷಡ್ವಿ
ರಾಮಂ. ॥

ಉದಾಹರಣ:

(ವಸಂತವರ್ಣನೆ.)

ಅಂದಾವಾತಂ ಕ್ಷಿತಿಜನನಿಯುಂ ಸಾದರಂ ಪೂಜೆಗೈದಂ-।
ದಂದಾಳು ಪ್ರಾರ್ಥಿಸಿ, ಕಲಗಲಾರಾವದಿಂ ಪಾಡಿ ಮತ್ತಂ ॥

ಸಂದಾ ಭೃಂಗೀಸ್ವರದೆ ಕೊಡುವಾ ಮಂತ್ರಪುಷ್ಪಂಗಳಂತೇ ।
ಮಂದಾಕ್ರಾಂತಾನಿಲನಿನುಗುವಾ ಪೂಗಳೊಪ್ಪಿರ್ಕುಮಲ್ಲಿ.
|| ೫೩ ||

೫೭ ಹರಿಣೀವೃತ್ತಂ. ೪.

ನ ಸ ಮ ರ ಸ ಲಂ ಗಂ ಷಡ್ವಾರ್ಧಿಚ್ಯುತಂ ಹರಿಣೀ
ಮತಂ. ||

ಉದಾಹರಣ:

(ವೃಷಭೇಂದ್ರವಿಜಯಂ.)

ಕಮಲನಯನೇ ಕಂಜಾತಾಸ್ಯೇ ಕಲಾಧರಧಾರಿಣೀ ।
ಶಮಿತಶಮನೇ ಶೈವಾಧಾರೇ ಶಿವೇತರವಾರಿಣೀ ||
ವಿಮಲಚರಿತೇ ವಿದ್ಯಾರೂಪೇ ವಿಪತ್ಕುಲಹಾರಿಣೀ ।
ದಮಿಸು ಭವಮಂ ಧರ್ಮಾಕಾರೇ ದಯಾವತಿ
ಪಾರ್ವತೀ. || ೫೪ ||

ಹದಿನೆಂಟು ಅಕ್ಷರಗಳ ಪಾದದ ಧೃತಿಚ್ಛಂದಸ್ಸು.

೫೩ ವಿಬುಧಪ್ರಿಯಾ (ಮಲ್ಲಿಕಾಮಾಲಾ) ವೃತ್ತಂ. ೧.

ಹತ್ತರೊಳ್ ಯತಿ ರಂ ಸ ಜಂ ಜ ಭ ರಂ ಬರಲ್ವಿಬುಧ
ಪ್ರಿಯಂ. ||

ಉದಾಹರಣ:

(ವಸಂತವರ್ಣನೆ.)

ಎಲ್ಲಿ ಪೋದೊಡಮಲ್ಲಿ ಮೆಲ್ಲೆಲರೈದುಗುಂ ಬಗೆಗೊಳ್ಗುಮೆ- ।
ಲ್ಲೆಲ್ಲಿ ನೋಳ್ಪೊಡಮಲ್ಲಿ ಚಲ್ವ ಚಿಗುರ್ಪೊಗರ್ಸೊಬಗಾಲಿ-
ಸಲ್ ||
ಅಲ್ಲಿಗಲ್ಲಿಗೆ ನಿಲ್ಲದಿಂಚರವಕ್ಕಿ ಗುಲ್ಲದು ಕುಳ್ಳಿರಲ್- ।
ಕಲ್ಲಿ ಪೂವಳೆ ಮೇಲಲರ್ವುಡಿ ತುಂಬಿ ಪಾಡುಗುಮಳ್ಕ-
ಯಿಂ. || ೫೫ ||

೫೪ ಅರವಿಂದ. ೨.

ಋತುಶರಯುತಿ ನ ನ ಸಂ ಸ ತ ಯಂ ತೋರಲ್ಕರವಿಂದಂ. ॥

ಉದಾಹರಣ:

(ನೀತಿ.)

ಇವನಮೃತದ ನಿಲಯಂ ಪ್ರಭುವೈ ತಾನೋಷಧಿಗಳ್ಗೆ ।
ಕುವಲಯದದಧಿಪತಿ ಕಾಂತಿಯ ಪುಂಜಂ ಶರ್ವಶಿರಸ್ಥಂ ।
ಅವತರಿಸಲು ರವಿಮಂಡಲದೊಳ್ ನಷ್ಟದ್ಯುತಿಯಪ್ಪಂ ।
ಭುವನದಿ ಪರಭವನಸ್ಥನದಾವಂ ಮಾನಿತನಪ್ಪಂ? ॥ ೫೭ ॥

೫೫ ಕುಸುಮಿತಲತಾವೃತ್ತಂ. ೪.

ಭೂತರ್ತುಚ್ಛಿನ್ನಂ ಕುಸುಮಿತಲತಾ ಕೇಳ್ ಮ ತಂ ನಂ
ತ್ರಿ-ಯಂಗಳ್. ॥

ಉದಾಹರಣ:

(ನೀತಿ.)

ನಾರೀನೇತ್ರಾಂತಂ ಶರಮಳಿಕುಲಂ
ನಾರಿ, ಪೂಬಾಣಪೀಠಂ ।
ನಾರೀಸಂದೋಹಂ ಪಡೆ, ಜಡಧಿಜಂ
ಸ್ನೇಹಿತಂ ಶೀತಭಾನು ॥
ಮಾರಂಗಿಂತಿರ್ದುಂ ತ್ರಿಭುವನವನೇ
ಗೆಲ್ದಪಂ ಕಾರ್ಯಸಿದ್ಧಿ- ।
ದ್ವಾರಂ ಸತ್ವಂ ತಾನುಪಕರಣಮಲ್ಲೈ
ಮಹಾತ್ಮರ್ಗೆ ನಿತ್ಯಂ. ॥ ೫೮ ॥

ಹತ್ತೊಂಬತ್ತಕ್ಷರಗಳ ಚರಣದ ಅತಿಧೃತಿಚ್ಛಂದಸ್ಸು.

೫೬ ತರಳಂ. ೧.

ನ ಭ ರ ಸಂ ಜ ಜ ಗಂ ಮಹೇಶ್ವರವಿಶ್ರಮಂ ತರಳಂ
ಮತಂ. ||

ಉದಾಹರಣ:

(ಉತ್ತರರಾಮಚರಿತ್ರ.)

ಅನುಮತಂ ನಿಮಗಿಲ್ಲ ಮಂದಿರದಲ್ಲಿರಲ್ಸಖಿಯೆಂದು ನಿರ್- |
ಜನವನಾಂತದೆ ಬಿಟ್ಟೆನಾಂ ತೃಣದಂತೆ ದುಃಖಿಸಲಿಲ್ಲವು; ||
ಮನಸು ನೋಡಿ ಕರಂಗಿತೀಗ ಚಿರಾನುಭೂತವನಾದಿ
ಯಂ- |
ನೆನುತನಾಥನಳಲ್ವೊನೀಗಳೆಲ್ಲೆ ಪ್ರಸನ್ನತೆ ದೋರಿರ್ಕೈ. ||೫೮||

೫೭ ಶಾರ್ದೂಲವಿಕ್ರೀಡಿತಂ. ೨.

ಅರ್ಕಚ್ಛೇದದೆ ಮಂ ಸ ಜಂ ಸ ತ ತ ಗಂ ಶಾರ್ದೂಲ
ವಿಕ್ರೀಡಿತಂ. ||

ಉದಾಹರಣ:

(ಗೀತಗೋವಿಂದ.)

ಆವಾಸಂ ವನಮಾದುದಾಸಖಿಯು ಮೇ-
ಳಂ ಜಾಲಮಾಯ್ತುತ್ಕಟಾ.
ದಾವಜ್ವಾಲೆಗೆ ರೌದ್ರಮಾಯ್ತು ಬಿಸುಸುಯ್ಯಿಂ-
ದೊಂದಿ ಸಂತಾಪವುಂ ||
ಏವೇಳ್ವೆಂ ಬೆದರ್ದೇಣಿಯಾಗಿಹಳವಳ್
ನಿನ್ನಾ ವಿಯೋಗಾಗ್ನಿಯಿಂ |

ಕಾವಂ ಕಾಲನವಳ್ಗೆ ತಚ್ಚರಿತಮೇ
ಶಾರ್ದೂಲವಿಕ್ರೀಡಿತಂ. ॥ ೭೯ ॥

ರಾಜೇಂದ್ರಂ ರಘುನಂದನಂ ವನಕೆ ಬಂ-
ದಂ ಮತ್ತಮಿಂದೀಗಿದೇ ।
ಭೂಜಂಗಳ್ ಮಕರಂದಮಂ ಸುರಿಸಿ ಪೂ-
ವಣ್ಗೊಟ್ಟು ಸಂಪೂಜಿಕೆ ॥
ರಾಜೀವಾದಿಸುಗಂಧಮಂ ವನಸಮಿಾ-
ರಂ ತೀಡುತಂ ವೀಜಿಕೆ ।
ಕೂಜತ್ಪಕ್ಷಿಕುಲಂಗಳಿಂಚರದೆ ಗಾ-
ನಂ ಗೈಗೆ ಸಂಪ್ರೀತಿಯಿಂ. ॥ ೮೦ ॥

ಇಪ್ಪತ್ತು ಅಕ್ಷರಗಳ ಚರಣದ ಕೃತಿಚ್ಛಂದಸ್ಸು.

೫೮ ಮತ್ತೇಭವಿಕ್ರೀಡಿತವೃತ್ತಂ. ೧.

ಯತಿ ಹಸ್ತಕ್ಕೆ ಸ ಭಂ ರ ನಂ ಮ ಯ ಲ ಗಂ ಮತ್ತೇಭವಿ
ಕ್ರೀಡಿತಂ. ।

ಉದಾಹರಣ:

(ವಸಂತವರ್ಣನ.)

ಅಳಿವಿಂಡೈದೆ ಸುಗಂಧಕೆಂದು ಬರಿಕ್ಕೈ-
ಯಾಟಂಗೊಳಲ್ತಣ್ಣೆಲರ್ ।
ಕೊಳಮಂ ಪೊಕ್ಕೆಳೆದಾಡಿ ತಾವರೆಗಳಂ
ತದ್ಧೂಳಿಯಂ ತಾಳಿಯುಂ ॥
ತಳಿರಂ ತುಂಡಿಸಿ ಚಲ್ಲೆ ಕೋಕಿಲೆ, ಕುಕಿಲ್
ಘಂಟಾರವಂಬೊಲ್ತಿರಲ್ ।
ತಿಳಿಯಲ್ಕಾನನದಲ್ಲಿ ವೃತ್ತಮೆಸೆಗುಂ
ಮತ್ತೇಭವಿಕ್ರೀಡಿತಂ. ॥ ೮೧ ॥

ಹಿಮತಾಂಬೂಲರಸಾರುಣಾಧರಮುದಂ-
ಚದ್ಘರ್ಮವಾರ್ಬಿಂದುವಿ- |
ಶ್ರಮುಖಂ. ಕೌಸುಮತಾಳವೃಂತಪವನ-
ವ್ಯಸ್ತಾಲಕಂ ಚಂದನಾಂ- ||
ಕ ಮಹೋತ್ತುಂಗಕುಚಂ, ನಿತಂಬಶಿಥಿಲ-
ಕ್ಷೌಮಾಂಬರಂ, ನವ್ಯಪು- |
ಷ್ಪಮನೋಜ್ಞಾಭರಣಂ ನಿದಾಘದೊಳೆ
ಕಣ್ಗೆಂಬಾಯ್ತು ಕಾಂತಾಜನಂ. || ೬೨ ||

೫೯ ಮದಾಲಸಾ (ಛಂದೋ) ವೃತ್ತಂ. ೨ ಸಾಕಿಧಾಟಿ.

ರಂ ನ ಭಂ ಮ ಸ ಸ ಲಂ ಗುರು ರುದ್ರಸ್ಥಾನದೆ ನಿಲ್ಕೆ
ಮದಾಲಸಂ. ||

ಉದಾಹರಣ:

(ರಾಜಶೇಖರ ೧ಳ ಆಶ್ವಾಸಂ.)

ಇಂದುಖಂಡಮಹಿಕುಂಡಲಮುದ್ಯತ್ಸ್ವರ್ಣದಿ
ಭಾಳವಿಲೋಚನಂ |
ದಂದಶೂಕಪತಿಹಾರಮುದಾರಸ್ಮೇರಮುಖಂ
ದ್ವಿರದಾಜಿನಂ ||
ಸುಂದರಾಂಗಮುಸಿತದ್ಯುತಿಕಂಠಂ ಕಣ್ಗೆರ-
ದೀಯೆ ಬೆಡಂಗನಾ- |
ನಂದಿವಾಹನನಘಂ ನಿಜರೂಪಂದೋರಿದ-
ನದ್ರಿಸುತಾಧವಂ. || ೬೩ ||

೬೦ ಸುವಂಶಾವೃತ್ತಂ. ೩.

ಏಳಕ್ಕರಕ್ಕೆ ತೋರ್ಕುಂ ಯತಿ ಮ ರ ಭ ನಂ ತಂ ತ
ಗಂ ಗಂ ಸುವಂಶಂ. |

ಉದಾಹರಣ:

(ವಸಂತವರ್ಣನಂ.)

ಪೂಗೋಲಂ ಚೈತ್ರನೀವಂ ಸಿರಿಗುವರಗಿನ್ನೀ
ವಿಯೋಗಿಪ್ರತಾನಂ |
ಸಾಗುಂ ಬಂತಂತ್ಯಕಾಲಂ
ದಿಟಮಿದೆನುತಂ ಧೂಮಕೇತುವ್ರಜಂ ತಾಂ ||
ಈಗಳ್ ಮೂಡಿರ್ಪುದೆಂಬಂ-
ತವನಿಜಲತಾನೀಕದೊಳ್ ಲೋಚನಕ್ಕಿಂ- |
ಪಾಗೆತ್ತೆತ್ತಂ ಸಿತಾಂತಂ
ನೆಗೆದುದು ವನಾಂತೆಗಳೊಳ್ಕುಟ್ಮಲೌಘಂ. || ೬೪ ||

೬೧ ಸುವದನಾವೃತ್ತಂ. ೪.

ಏಳೇಳಕ್ಕಂ ವಿರಾಮಂ
ಮ ರ ಭ ನ ಯ ಭ ಲಂ ಗಂ ತಾಂ ಸುವದನಂ. ||

ಉದಾಹರಣ:

(ನೀತಿ.)

ಕ್ಷೀರಂ ತನ್ನಲ್ಲಿ ಬಂದಾ
ಜಲವನೊಲಿವಿನಿಂ ಕೂಡಿತ್ತು ಬಳಿಕಾ |
ನೀರಾಕ್ಷೀರಕ್ಕೆ ತಾಪಂ-
ಬರೆ ತಡೆಯದೆ ತಾಂ ಪೋದತ್ತನಲನೊಳ್ ||
ಕ್ಷೀರಂ ಮಿತ್ರಂಗೆ ಬಂದಾ
ವ್ಯಥೆಗುರಿಯೊಳೆ ತಾನುಂ ಪೋಗುತಿರಲಾ |
ನೀರಂ ಕಂಡಾಯ್ತು ಶಾಂತಂ
ಗೆಳೆತನಮಿಪುದೀಯುಂದಂ ಸುಜನರಾ. || ೬೫ ||

೬೨ ಉತ್ಪಲಮಾಲಾವೃತ್ತಂ. ೫.

ಉತ್ಪಲಮಾಲೆ ಭಂ ರ ನ ಭ ಭಂ ರ ಲ ಗಂ ನವಮಂ
ವಿರಾಮಕಂ. ||

ಉದಾಹರಣ:

(ರಾಜಶೇಖರ ೮ ಆ.)

ಎನ್ನ ಸಹಾಯದಿಂ ನೆರೆದು ತಾಳ್ದು ಘನತ್ವಮನಸ್ಮದೀ-
ಯ ಮಿ- |
ತ್ರೋನ್ನತತೇಜಮಂ ತವಿಪನೆಂದನಿಲಂ ಮುಗಿಲಂ ಕನಲ್ದು
ಪೋಯ್- ||
ದನ್ನೆಗಳಲ್ ಘನಧ್ವನಿ ಕಳಲ್ದುದಿರ್ದತ್ತು ಘನೋಪಳಾ
ಚ್ಛದಂ- |
ತನ್ನಿಜಮಲ್ಲದಿರ್ದೊಡಿಳೆಯಲ್ಲಿದು ನೀರದನಾಮಮಾಂಪು
ದೇ? || ೬೬ ||

೬೩ ಮಧ್ಯಮವೃತ್ತಂ. ೬.

ಹರವಿರಾಮದೆ ನಂ ಭ-ಯುಗಂ ಮಂ ಸದ್ವಯ ಲಂ ಗ
ಮೆ ಮಧ್ಯಮಂ. |

ಉದಾಹರಣ:

ತಿವಳಿಯೊಳ್ಮಡುಕಾರದ ಮಣ್ಣಿಂದಿಕ್ಕಿದಲಂಡದ ಬೆಂಕಿ
ಯಿಂ |
ಕವಿವ ಕೀಳ್ಮದದೊಳ್ಪೊನಲೊಳ್ಪುಯ್ಯಾರದ ಪೆರ್ನೊರೆ
ಯಿಂತಗುಳ್- ||
ದವಿಹತಾಂಬುವ ಬಲ್ಪೊನಲಿಂದಿರ್ಪಾರದ ಬಟ್ಟೆಯೊಳೊ
ಕ್ಕ ಪ- |
ಲ್ಲವನಿಕಾಯದಿನಂದರಿದಂ ಕಾಡಾನೆಗಳಾಗಳೆ ಪೋದುದಂ.
|| ೧ ||

ಇಪ್ಪತ್ತೊಂದು ಅಕ್ಷರಗಳ ಪಾದವುಳ್ಳ ಪ್ರಕೃತಿಚ್ಛಂದಸ್ಸು.

೬೪ ಸ್ರಗ್ಧರಾವೃತ್ತಂ. ೧.

ಏಳೇಳಕ್ಕಂ ವಿರಾಮಂ ಮ ರ ಭ ನ ಯ ಗಳಿಂ
ಯ-ದ್ವಯಂ ಸ್ರಗ್ಧರಾಖ್ಯಂ ।

ಉದಾಹರಣ:

(ವರ್ಷಾವರ್ಣನಂ.)

ಶೂರಂ ದೂರಂ ನಭೋದ್ವಂ
ಸಮಯಮುಮಿದಯೋಗ್ಯಂ ತವೋದಂಡಯಾತ್ರಾ ।
ಘೋರಕ್ಕಾಂ ಪೋಗಲಾರೆಂ
ಚಳಿಮಳೆಗಳೊಳುಂಟೆನ್ನ ಪಾಲ್ಗಾವಗಂ ತದ್- ॥
ಭಾರಂ ಛಾಯಾಯುತಂ ವಿಶ್ರ-
ಮಿಪುದುಚಿತಮೆಂದಾ ಘನಾವಾಸದೊಳ್ ನಿಂ- ।
ದೋರಂತವ್ಯಕ್ತನಾಗಲ್
ಜಗವ ಮುಸುಕುವಂತೇ ತಮಂ ಕಾರದಿರ್ಕುಂ. ॥೬೭॥

೬೫ ತುರಂಗ (ತರಂಗ) ವೃತ್ತಂ. ೨.

ರಂ ನರಂ ನರ ನರಂಗಳುಂ ಬರೆ
ತುರಂಗಮಂ ವಿರತಿ ರಾಂತದೊಳ್. ।

ಉದಾಹರಣ:

(ನೀತಿ.)

ನೀರಸಂ ತಿರಿಕೆಯನ್ನವಂತದು ದಿನಕ್ಕೆ
ತಾಂ ದೊರೆವುದೊರ್ಮೆಯೇ ।
ಧಾರುಣೀತಳವೆ ಮಂಚಕಂ ನಿಜಶರೀರವೆ
ಪರಿಜನಂ ಸದಾ ॥

ನೂರು ಚಿಂದೆಗಳ ಬಟ್ಟೆಯ್ಯೆ
　ಯನನುಕೂಲೆ ಕರ್ಕಶೆ ಕುರೂಪಿಣಿ |
ನಾರಿಯಿಂತಿರೆಯುಮಕ್ಕಟಾ!
　ಬಿಡದು ದೀನನಂ ವಿಷಯದಾಶೆಯು. || ೬೮ ||

೬೬ ಚಂಪಕಮಾಲಾವೃತ್ತಂ. ೩.

ಯತಿ ಪದಿಮೂರರಿಂ ನ ಜ ಭ ಜ-ತ್ರಯ ರಂ ಗಳೆ ಚಂಪಕಸ್ರಜಂ. |

ಉದಾಹರಣ:

(ರಾಜಶೇಖರ ೧೧ ಆ. ೩೯.)

ಖರಕರಸಿದ್ಧನೇಳ್ದು ದಿವಿಜೇಂದ್ರದಿಶಾದ್ರಿಗುಹಾನಿವಾಸದಿಂ- |
ದುರುತಿಮಿರಾಭಿಭೂತಭುವನೋನ್ನತಲೋಪಕೆ ತನ್ನ ವಿದ್ಯೆಯಂ |
ಧರೆಗರುಪಲ್ಕೆ ಮುಟ್ಟಿಸೆ ಕರೋತ್ಕರಸಿದ್ಧರಸಪ್ರವಾಹಮಂ|
ಪಿರಿದದು ಚಿನ್ನಮಾದುದೆನೆ ಪೊಂಬಿಸಿಲೊಂದಿರೆ ಕಣ್ಗೆ ರಂಜಿಕುಂ. || ೬೯ ||

ಇಪ್ಪತ್ತೆರಡು ಅಕ್ಷರಗಳ ಪಾದವುಳ್ಳ ಆಕೃತಿಚ್ಛಂದಸ್ಸು.

೬೭ ಮಹಾಸ್ರಗ್ಧರಾವೃತ್ತಂ. ೧.

ಪದಿನೈದಕ್ಕಂ ವಿರಾಮಂ ಸ ತ ತ ನ ಸ ರ ರಂ ಗಂ ಮಹಾಸ್ರಗ್ಧರಾಖ್ಯಂ. ||

ಉದಾಹರಣ:

(ಹಿಮವರ್ಣನಂ.)

ಅರುಣಂ ತಾನೇಳ್ವನೇಕೆಬ್ಬಿಸುವನೊ ರವಿಯುಂನಾತನೇ ಕೇಳ್ವನೀಗಾ |

ತುರದಿಂ ರಥ್ಯಂಗಳೇಕಾರಥವನೆಳೆವವಿಂತೈಕಿಲೊಳ್ ಪಕ್ಕಿ
ಗಳ್ ನಿ- ||
ಷ್ಠುರದಿಂದೀವಾರ್ತೆಯಂನೀಕಲಕಲರವದಿಂ ಪೇಳ್ದವೇಕ
ಕ್ಕಟಾ! ಯೆಂ- |
ದುರೆ ಬೈದತ್ತಾಪ್ರಿಯಾಲಿಂಗನಸುಖವನಗಲ್ದೇಳ್ವ ಕಾಂತಾ
ಕದಂಬಂ. || ೭೦ ||

೬೮ ಅಶ್ವಧಾಟಿ (ಅಮೃತಧ್ವನಿ). ೨.

ಇಂತಶ್ವಧಾಟಿ ಗಿರಿಶೈಲಸ್ಥಿತಂ ವಿರತಿ ತಂ ಭಂ ಯ ಜಂ
ಸ ರ ನ ಗಂ. ||

ಉದಾಹರಣ:

(ನೀತಿ.)

ದಾನಕ್ಕೆ ಮಾನಮದು, ಮಾನಕ್ಕೆ
ಸದ್ಭಕುತಿ, ಶೌರ್ಯಕ್ಕೆ ಮಾಜ್ನಿಯಮನಂ, |
ಜ್ಞಾನಕ್ಕೆ ತಾಳ್ಮೆ, ವಿನಯಂ
ಪ್ರಾಜ್ಞಸದ್ಗುಣಕೆ, ವಿತ್ತಕ್ಕೆ ಪಾತ್ರದೆ ಲಯಂ ||
ಮೌನಿತ್ವವಜ್ಞತೆಗೆ, ಸೌಜನ್ಯವೈಸಿರಿಗೆಯಕ್ರೋಧವೇ ತಪ
ಸಿಗೆ |
ಭೂನುತ್ಯಭೂಷಣವು, ಶೀಲಂ ಸಮಸ್ತರಿಗೆ ಮೇಲಾದ
ಲಂಕರಣವು. || ೭೧ ||

ಇಪ್ಪತ್ತುಮೂರಕ್ಷರಗಳ ಚರಣದ ವಿಕೃತಿಚ್ಛಂದಸ್ಸು.

೬೯ ಮತ್ತಾಕ್ರೀಡಾವೃತ್ತಂ. ೧.

ಮತ್ತಾಕ್ರೀಡಂ ದಿಗ್ದಿಕ್ಛೇದಂ ವಸು ಗ ಮನು ಲ ಗಳ
ಕಡೆಯೊಳಿರಲು ಗಂ. ||

ಉದಾಹರಣ:

(ವಸಂತವರ್ಣನ.)

ಮಾರೋರ್ವೀಶಂ ಚೈತ್ರಂಗಂ
  ದಿಗ್ವಿಜಯಗಮನಕೆ ಕರಿಯ ತರಿಸೆನೆ ಶೃಂ- |
ಗಾರಂಗೈಯಲ್ಕೈತಂದಾಗಳ್
  ತಲೆಗೊಡವಲನಿಲಸೃಣಿಯಿನಿರಿದೊಡಂ ||
ದಾರಕ್ತಂ ಮತ್ತಾಕ್ರೀಡಸ್ಥಾನದೆ
  ಕರಿಯೊಳು ಕುಜಗಳೊಳು ಸಿಡಿದ ವೊಲ್ |
ತೋರಿತ್ತಾ ವ್ರಾದಿಕ್ಷ್ಮಾಜವ್ರಾ
  ತದೊಳೆ ಚಿಗುರೆಲೆವೊಳಕೆದುರುಗಲದು. || ೭೨ ||

೭೦ ಹಂಸಗತಿ. ೨.

ನ ಗಣ ಜ-ಷಟ್ಕ ಲ ಗಂ ಋಷಿಶಾಸ್ತ್ರದೆ ವಿಶ್ರಮಣಂ ತಿಳಿ ಹಂಸಗತಿ. ||

ಉದಾಹರಣ:

(ನೀತಿ.)

ಹರಿಹರಿಯೆಂದೆನುತಂ ಜಪಿಸು
  ತ್ತುರೆ ದೇವನದೀತಟದಲ್ಲಿರಲೊ? |
ತರುಣಿಯರೊಳ್ ಗುಣರತ್ನೆಯರೊಳ್
  ಪ್ರಿಯಪತ್ನಿಯರೊಳ್ ಸುಖದಿಂದಿರಲೋ? ||
ಸುರಚಿರಕಾವ್ಯರಸಾಮೃತವೀಂ
  ಟಲೊ? ಶಾಸ್ತ್ರವನೋದಿ ಜಸಂಬಡಲೋ? |
ಅರಿಯೆನದೆಂತಿರಬೇಕಿಹುದಾ
  ಯುಷವಿಾನರಜನ್ಮದೆ ಮೂರುದಿನಂ. || ೭೩ ||

೭೧ ಮದಿರಾವೃತ್ತಂ. ೩.

ಏಳು ಭ ಮಿರ್ಗುರು ಷಷ್ಠದೆ ಷಷ್ಠದೆ ವಿಶ್ರಮಣಂ
ಮದಿರಾಹ್ವಯವೃತ್ತಂ. ।

ಉದಾಹರಣ:

(ನೀತಿ.)

ಆನೆಯ ಹಾಗೆ ಮದಾಂಧಕನಾದೆನು
ಜ್ಞಾನಲವಾನ್ವಿತನಾಗಿರುವಾಗಳ್ ।
ನಾನಖಿಲಜ್ಞನೆನುತ್ತುರೆ ಸೊಕ್ಕಿದು
ದೆನ್ನಯ ಮಾನಸಮಾಸಮಯಕ್ಕೆ ॥
ಜ್ಞಾನಿಗಳಿಂದೆನಗೊಂದಿನಿಸೊಂದಿನಿಸುಂ
ತಿಳಿಯುತ್ತಿರುವಾಕ್ಷಣದಲ್ಲೇ ।
ನಾನತಿಮೂರ್ಖನೆನುತ್ತಿಹೆನೆನ್ನಭಿ
ಮಾನಮದುಂ ಜ್ವರದಂತಿಳಿದತ್ತೈ. ॥ ೭೪ ॥

ಇಪ್ಪತ್ತುನಾಲ್ಕಕ್ಷರಗಳ ಪಾದದ ಸಂಸ್ಕೃತಿಚ್ಛಂದಸ್ಸು.

೭೨ ಲಲಿತವೃತ್ತ. ೧. (ಸಾಕೀಧಾಟಿ.)

ಮುನಿತುರಗಗಳೊಳ್ ಯತಿ ಬರೆ ಲಲಿತಂ
ನ ನ ಭ ನ ಜ ನ ನ ಯ ಯುಕ್ತಂ. ॥

ಉದಾಹರಣ:

(ನೀತಿ.)

ಜರೆಗೆ ಸೊರಗಿಯುಂ, ಹಸಿದು ಬಳಲಿಯುಂ,
ದೊರೆದಿರೆ ಸ್ಥಿತಿ ಬಲು ಘೋರಂ ।
ಕೊರಗಿರೆ ಕರಣಂ, ಮಸುಳ್ದಿರೆ ಕಳೆಯುಂ,
ತೊಲಗುತಿರಲು ಹರಣಂಗಳ್ ॥

ದ್ವಿರದ ಶಿರದ ಮೇಲೆರಗಿ ರುಧಿರಮಂ
ಸುರಿವ ವನದ ಮೃಗರಾಜಂ ।
ಬಿರುದಿನ ಬಲಮಂ ಪ್ರಕೃತಿಯ ಛಲಮಂ
ತೊರೆದೊಣತೃಣಕೆಳಸೀತೇ? ॥ ೭೫ ॥

ಇಪ್ಪತ್ತೆಯ್ದು ಅಕ್ಷರಪಾದವುಳ್ಳ ಅಭಿಕೃತಿಚ್ಛಂದಸ್ಸು.

೭೩ ಹಂಸಪದಾವೃತ್ತಂ. ೧. (ಸಾಕೀಧಾಟಿ.)

ವಸುಮುನಿಯತಿ ಬರೆ ಶ್ರುತಿ ನ ಗಣದೆ ಸಂ
ಭ-ತ್ರಯದಿಂ ಗುರು ಹಂಸಪದಂ. ॥

ಉದಾಹರಣ:

(ನೀತಿ.)

ಧರಣಿಯ ತಲವನು ಕಡಿದೆನು, ನಿಧಿಯಂ
ಶೋಧಿಸಬೇಕೆನುತಂ ಸತತಂ ।
ಕರಗಿಸಿದೆನು ಪರಿ ಪರಿ ಗಿರಿಯೊಳಹಾ
ಧಾತುಗಳಂ ಕನಕಭ್ರಮೆಯಿಂ ॥
ದೊರೆಗಳ ವಿನಯದಿನುಪಚರಿಸಿದೆನಾ
ನೋದಿದೆನೈ ಶ್ರುತಿಶಾಸ್ತ್ರಗಳಂ ।
ದೊರೆಯದು ಕವಡಿಯುಮುವನಿ ಬರಿದೆಲೈ
ಪಾಪಿ ದುರಾಶೆ ಬಿಡೆನ್ನ ಬಿಡು! ॥ ೭೬ ॥

ಇಪ್ಪತ್ತಾರು ಅಕ್ಷರಪಾದದ ಉತ್ಕೃತಿಚ್ಛಂದಸ್ಸು.

೭೪ ವನಲತಾವೃತ್ತಂ. ೧. (ಸಾಕೀಧಾಟಿ.)

ವನಲತೆ ಕರಿವಸುಯತಿ ವಸು ನಗಣದ
ಕಡೆಯೊಳಿಪುದು ಗುರುಯುಗ್ಮಂ. ॥

ಉದಾಹರಣ:

(ನೀತಿ.)

ತಿರುಗಿ ತಿರುಗಿ ಧನಯುತರ ವದನವನೆ
ಪರಿಕಿಸುವುದು ನಿನಗಿಲ್ಲೈ।
ದೊರೆಗಳ ಬಿರುನುಡಿ ಕಿವಿಯುಲಿ, ಸಟೆ ಸವಿ
ನುಡಿ ನುತಿ ವದನದೊಳಿಲ್ಲೈ ॥
ದೊರೆದೆಳೆಕರಿಕೆಯು ಪಸಿದೊಡೆ ಮೆಲುತಿಹೆ,
ಪವಡಿಪೆ ಬರೆ ಸುಖನಿದ್ರೆ।
ಹರಿಣನೆ ತನಗುಸುರೆನಿತು ತಪಸುಗಳ
ತಪಿಸಿದೆ ತಪದೆಡೆಯೆಲ್ಲೈ. ॥ ೭೭ ॥

೭೫ ಹಯಪ್ಲುತಿ. ೨.

ಹಯಪ್ಲುತಿ ಜ ಸಂ ನ ಭ ಜ ಸಂ ನ ಭ ಲ ಗಂ
ಯತಿ ಚತುರ್ಥಕೆ ಚತುರ್ಥಕೆ ಬರೆ. ॥

ಉದಾಹರಣ:

(ರಾ. ಶೇಖ.)

ಅಳಿಪ್ರಭಲಲಾಟಗಚಳಾಳಕೆ ಖಳಾಪಹೆ
ಬಳಾನ್ವಿತೆ ಮಿಳದ್ಘನಗುಣೆ।
ಬಲಾನುಜೆ ಬಲಿಪ್ರಿಯೆ ತಲಾಂಚಿತಜಲೋದ್ಭವೆ
ಬಲಾಹಿತಮುಖಾಮರನತೇ ॥
ಗಲಾನ್ವಿತಹಲಾಹಲಬಿಲೇಶಯಕಳೇವರ
ವಿಲಾಸದೆ ಕಲಂಕರಹಿತೇ।
ಕಲಾಧರಕಲಾಧರೆ ಸುಲೋಚನೆ ಕಲೋಜ್ವಳೆ
ಶಿಲೋಚ್ಚಯಸುತೇ ಜಯ ಜಯಾ. ॥ ೭೮ ॥

## ಇತರ ಸಮವೃತ್ತಗಳು.

೧. ಇತರ ಸಮವೃತ್ತಗಳಲ್ಲಿ ೨೬ ಅಕ್ಷರಗಳಿಗಿಂತ ಹೆಚ್ಚು ಅಕ್ಷರಗಳ ಪಾದವುಳ್ಳ ಮಾಲಾವೃತ್ತಗಳು, ದಂಡಕಗಳು ಎಂಬ ಎರಡು ಭೇದಗಳಿವೆ. ಇವಲ್ಲದೆ ೨೬ ಅಕ್ಷರಗಳಿಗಿಂತ ಕಡಿಮೆ ಅಕ್ಷರಗಳ ಚರಣಗಳುಳ್ಳ ಅನುಷ್ಟುಪ್ ಶ್ಲೋಕಗಳೆಂತಲೂ ಉಪ ಜಾತಿವೃತ್ತಗಳೆಂತಲೂ ಎರಡು ಭೇದಗಳುಂಟು. ಇವೆಲ್ಲವುಗಳಲ್ಲಿ ಮುಖ್ಯ ವೃತ್ತಗಳ ಲಕ್ಷಣಗಳನ್ನು ಕ್ರಮದಿಂದ ಹೇಳುತ್ತೇವೆ.

### ಮಾಲಾವೃತ್ತಗಳು.

೩೬ ಮೂವತ್ತಕ್ಷರಗಳ ಲಲಿತ (ಲಯಗ್ರಾಹಿ) ವೃತ್ತ. ೧.

ಭಂ ಜ ಸ ನ ಭಂ ಜ ಸ ನ ಭಂ ಯ ಮಿರೆದಿಗ್ದ್ವಿರದ
ದಿಗ್ವಿರತಿ ತೋರಲದು ತಾಂ ಲಲಿತವೃತ್ತಂ. ||

ಉದಾಹರಣ:

(ರಾಜಶೇಖರ ೧ಳ ಆ. ೮೮.)

ಮಾರಜನಕಂ ವಿಮಲಸಾರಸಭವಂ ದಿವಿಜ
ವಾರವರನುಂ ದಹನನಾರವಿತನೂಜಂ |
ಧೀರದಿತಿಜಂ ವಿನುತನೀರನಿಲಯಂ ಪೃಥು
ಸಮೀರನನಘಂ ಘನಕುಬೇರನನಲಾಕ್ಷಂ ||
ವೀರಗಣಮುಂ ಪ್ರಮಥಸೂರನಿವಹಂ ಸಮದ
ವಾರಣಮುಖಂ ನವಮಯೂರಪತಿವಾಹಂ |
ಸಾರಿ ನೆರೆದೊಪ್ಪಿರೆ ಕೃಪಾರಸಸಮುದ್ರನಗ
ಜಾರಮಣನುಜ್ಜ್ವಲಪುರಾರಿ ಮೆರೆದಿರ್ದಂ. || ೭೯ ||

### ದಂಡಕಗಳು.

ದಂಡಕಗಳಿಗೆ ಇಷ್ಟೇ ಚರಣಗಳಿರಬೇಕೆಂದು ನಿಯಮವಿಲ್ಲ.

ಪ್ರತಿಯೊಂದು ಚರಣವು ತನ್ನಷ್ಟಕ್ಕೆ ಸ್ವತಂತ್ರವಾಗಿರುತ್ತದೆ. ಒಂದ
ಚರಣದಲ್ಲಿ ೨೭ರಿಂದ ೯೯೯ರ ವರೆಗೆ ಅಕ್ಷರಗಳು ಇರಬಹುದು.

೭೭ ಇಪ್ಪತ್ತೇಳು ಅಕ್ಷರಗಳ ಚರಣದ ಚಂಡವೃಷ್ಟಿಪ್ರಪಾತವೆಂ
ದಂಡಕವು. ೨.

**ಮೊದಲು ನ ಯುಗಳಂ ಬಳಿಕ್ಕೇಳು ರೇಫಂ**
**ಬರಲ್ಚಂಡವೃಷ್ಟಿಪ್ರಪಾತಾಭಿಧಂ ದಂಡಕಂ. ||**

ಅರ್ಣ, ಅರ್ಣವ, ವ್ಯಾಳ, ಜೀಮೂತ, ಲೀಲಾಕರ, ಉದ್ದಾಮ
ಶಂಖ, ಪದ್ಮಕ, ತಕ್ಷಕ ಮುಂತಾದ ದಂಡಕಗಳ ಲಕ್ಷಣವು.

೭೮ ಮೂವತ್ತಕ್ಷರ ಚರಣದ ಅರ್ಣದಂಡಕವು.

**ಪ್ರತಿಚರಣವಿವೃದ್ಧರೇಫಂಗಳರ್ಣಾರ್ಣವ**
**ವ್ಯಾಳಜೀಮೂತಲೀಲಾಕರೋದ್ದಾಮಶಂಖಾದಿಗಳ್.**

ಅರ್ಥ:—ಚಂಡವೃಷ್ಟಿಪ್ರಪಾತ ದಂಡಕದ ಮೇಲೆ ಒಂದೊಂದು
ರ ಗಣವು ಹೆಚ್ಚಿದ್ದಂತೆ ಅವಕ್ಕೆ ಅರ್ಣ, ಅರ್ಣವ, ವ್ಯಾಳ ಮುಂತಾದ
ಹೆಸರುಗಳು ಬರುತ್ತವೆ. ಉದಾಹರಣಾರ್ಥವಾಗಿ ಮಾಲತೀ
ಮಾಧವ ನಾಟಕದೊಳಗಿನ ೫೪ ಅಕ್ಷರದ ಪದ್ಮಕವೆಂಬ ಸಂಸ್ಕೃತ
ದಂಡಕವನ್ನು ಕೆಳಗೆ ಬರೆಯುತ್ತೇವೆ.

ಚಾಮುಂಡಾತಾಂಡವ ವರ್ಣನ.

**ಪ್ರಚಲಿತಕರಿಕೃತ್ತಿಪರ್ಯಂತಚಂಚನ್ನಖಾಘಾತ**
**ಭಿನ್ನೇಂದುನಿಸ್ಯಂದಮಾನಾಮೃತಶ್ಚ್ಯೋತ**
**ಜೀವತ್ಕಪಾಲಾವಲೀಮುಕ್ತ-ಚಂಡಾಟ್ಟಹಾಸ**
**ತ್ರಸದ್ಭೂರಿಭೂತಪ್ರವೃತ್ತಸ್ತುತಿ.** || ೮೦ ||

೭೯ ಪ್ರಚಿತಕವೆಂಬ ದಂಡಕವು.

**ಪ್ರಚಿತಕಮೆನಿಪುದೈ ದಂಡಕಂ ನ ದ್ವಯಂ ಬಂದ**
**ಮೇಲೇಳಿರಲ್ ಯಾದಿ ರಾನ್ಯಂ ಗಣಂ ತಾಂ. ||**

ಅರ್ಥ:-ಎರಡು ನ ಗಣಗಳನಂತರದಲ್ಲಿ ಯ, ಸ, ತ, ಜ, ಭ ಗಣಗಳಲ್ಲಿ ಯಾವದೊಂದು ಏಳು ಸಾರಿ ಬಂದರೆ, ಪ್ರಚಿತಕವೆಂಬ ದಂಡಕವಾಗುತ್ತದೆ. ಉದಾಹರಣವು ಲಕ್ಷಣಪದ್ಯವೇ.

## ಅನುಷ್ಟುಪ್-ಶ್ಲೋಕಗಳು.

ಈ ಶ್ಲೋಕಗಳು ಅನುಷ್ಟುಪ್-ಛಂದಸ್ಸಿನಲ್ಲಿರುವ ವೃತ್ತಗಳ ಕೆಲಕೆಲವು ಚರಣಗಳ ಮಿಶ್ರಣದಿಂದಾಗಿರಬಹುದು. ಅನುಷ್ಟುಪ್ ಛಂದಸ್ಸಿನ ಭೇದವಾಗಿರುವ ಕಾರಣ ಇವುಗಳ ಒಂದೊಂದು ಚರಣಕ್ಕೆ ಎಂಟು ಅಕ್ಷರಗಳಿರಬೇಕೆಂಬದು ಸ್ಪಷ್ಟವದೆ. ಇವಕ್ಕೆ ನಾಲ್ಕು ಚರಣಗಳಿರುತ್ತವೆ.

ಶ್ಲೋಕಗಳ ಸಾಧಾರಣ ಲಕ್ಷಣವು.

೮೦ ಯುಗ್ಮವಿಪುಲಾಶ್ಲೋಕವು. ೧.

**ಬರಲಾಗದು ನಂ ಸಂ ತಾಂ |**
**ಪರಕ್ಕಾದಿಯು ವರ್ಣದಾ ||**
**ಸರಿಯೊಳ್ ಜಂ ಬೆಸಕ್ಕಂ ಯಂ |**
**ಬರಲ್ ಶ್ಲೋಕಂ ಚತುರ್ಥದಿಂ. || ೧ ||**

ಅರ್ಥ:—ಚರಣದ ಆದ್ಯಕ್ಷರದ ಮುಂದೆ ನ ಸ ಗಣಗಳು ಬರಬಾರದು. ನಾಲ್ಕನೇ ಅಕ್ಷರದನಂತರ (ಸರಿಯೊಳ್) ಸಮ ಚರಣಗಳಲ್ಲಿ ಜ ಗಣವೂ, (ಬೆಸಕ್ಕಂ) ವಿಷಮ ಚರಣಗಳಲ್ಲಿ ಯ ಗಣವೂ ಬಂದರೆ, ಯುಗ್ಮವಿಪುಲಾಶ್ಲೋಕವಾಯಿತು.

೮೧ ಮತ್ತೊಂದು ವಿಪುಲಾಶ್ಲೋಕವು. ೨.

ಅಥವಾ ಜ ಗಣಂ ಬರಲ್ ।
ಚತುಷ್ಪಾದಂಗಳಲ್ಲಿಯುಂ ॥
ಸೈತವಾಚಾರ್ಯವರ್ಯನಾ ।
ಮತದಿಂ ವಿಪುಲಾಹ್ವಯಂ. ॥ ೧ ॥

ಅರ್ಥ:—(ಚತುರ್ಥದಿಂ) ಎಂಬ ಹಿಂದಿನ ಶ್ಲೋಕದ ವಾಕ್ಯವು ಇಲ್ಲಿಯೂ ಸಂಬಂಧಿಸಿರುತ್ತದೆ.

ಎಲ್ಲಾ ಚರಣಗಳಲ್ಲಿ ನಾಲ್ಕನೇ ಅಕ್ಷರದನಂತರ ಜ ಗಣವಿದ್ದರೆ, ಸೈತವಾಚಾರ್ಯನು ಹೇಳಿದ ವಿಪುಲಾಶ್ಲೋಕವಾಗುತ್ತದೆ.

೮೨ ಭ ವಿಪುಲೆಯು. ೩.

ಅಯುಗ್ಮಾಂಘ್ರಿಯೊಳ್ ಭ ಗಣಂ ।
ದ್ವಿಯುಗ್ಮಾಕ್ಷರದಿಂ ಬರಲ್ ॥
ಜ-ಯುಕ್ತಂ ಸಮಾಂಘ್ರಿಯದೆ ।
ಭ-ಯುಕ್ತ ವಿಪುಲಾಹ್ವಯಂ. ॥ ೧ ॥

೮೩ ನ ವಿಪುಲಾಶ್ಲೋಕವು. ೪.

ಅಯುಗ್ಮದಲ್ಲಿ ನ ಗಣಂ ।
ದ್ವಿಯುಗ್ಮಾಕ್ಷರದತ್ತಣಿಂ ॥
ಜ-ಯುಕ್ತಂ ಯುಗ್ಮಚರಣಂ ।
ನ-ಯುಕ್ತ ವಿಪುಲಾಭಿಧಂ. ॥ ೧ ॥

ಹೀಗೆ ವಿಷಮಪಾದಗಳಲ್ಲಿ ನಾಲ್ಕನೆಯ ಅಕ್ಷರದನಂತರ ಯಾವ ಗಣವಿರುವದೋ ಅಂಥಾ ವಿಪುಲೆಯೆಂದು ಆ ಅನುಷ್ಟುಪ್ ಶ್ಲೋಕಕ್ಕೆ ಹೆಸರು ಬರುತ್ತದೆ. ಆದರೆ ಈ ಶ್ಲೋಕಗಳು ಸಂಸ್ಕೃತ

ದಲ್ಲಿ ಮಿತಿಮೀರಿ ರಚಿಸಲ್ಪಟ್ಟಿರುವದರಿಂದ ಮೇಲೆ ಹೇಳಿದ ವಿಷಮ ಚರಣದ ಸಂಬಂಧದ ನಿಯಮಕ್ಕೆ ವಿಕಲ್ಪ ಬರುತ್ತದೆ, ಅಂದರೆ ಮೊದಲನೆಯ ಚರಣದಲ್ಲಿ ಯ ಅಥವಾ ಭ ಅಥವಾ ನ ಗಣ ವಿದ್ದರೆ, ಮೂರನೆಯ ಚರಣದಲ್ಲಿ ತದ್ಭಿನ್ನ ಗಣವೂ ಒಮ್ಮೊಮ್ಮೆ ಬಂದಿರುತ್ತದೆ. ಇದಕ್ಕೆ ಉದಾಹರಣಗಳು:—

ಶ್ಲೋಕಗಳು. (ನಲೋಪಾಖ್ಯಾನ.)

— ⏑ —|— ⏑ —|   ⏑ — — | ⏑ — ⏑|
तेषामहंसंनिधौ त्वां । वरयिष्यामि नैषध ॥
— ⏑ ⏑|⏑ — —|   — ⏑ ⏑|⏑ — ⏑|
एवंतवमहाबाहो । दोषोनभवितेतिह ॥ १ ॥
— ⏑ —|⏑ ⏑ ⏑|   — — ⏑|⏑ — ⏑|
एतावदेवविबुधा । यथावृत्तमुदाहृतं ॥
— — —|⏑ — —|   — — ⏑|⏑ — ⏑|
मयाशेषेप्रमाणंतु । भवंतस्त्रिदशेश्वराः ॥ २ ॥

ಆದರೆ ಸಮಚರಣಗಳಲ್ಲಿ ಹೇಳಿದ ಜ ಗಣ ಮಾತ್ರ ತಪ್ಪದೆ ಬರುತ್ತದೆ. ಮತ್ತು ಚರಣಗಳ ಪ್ರಥಮಾಕ್ಷರದ ಮುಂದೆ **ನ, ಸ** ಗಣಗಳು ಎಲ್ಲಿಯೂ ಬರುವದಿಲ್ಲ ಎಂಬದಕ್ಕೆ ಉದಾಹರಣಗಳು ಮೇಲಿನ ಶ್ಲೋಕಗಳಲ್ಲೇ ಅವೆ.

## ಉಪಜಾತಿವೃತ್ತಗಳು.

ಒಂದೇ ಛಂದಸ್ಸಿನಲ್ಲಿರುವ ಒಂದೇ ಧಾಟಿಯ ಎರಡು ವೃತ್ತಗಳ ಕೆಲಕೆಲವು ಚರಣಗಳ ಮಿಶ್ರಣದಿಂದ ಈ ವೃತ್ತಗಳಾಗುತ್ತವೆ.

### ೮೪ ಉಪಜಾತಿವೃತ್ತಂ. ೧.

**ಓದಲ್ಕೆ ಪಾದಂ ಕೆಲವಿಂದ್ರವಜ್ರಂ |**
**ತದನ್ಯಪಾದಂಗಳುಪೇಂದ್ರವಜ್ರಂ ||**

ಇದಪ್ಪುದೈ ತಾನುಪಜಾತಿವೃತ್ತಂ ।
ಭೇದಂಗಳಕ್ಕುಂ ಪದಿನಾಲ್ಕಿದಕ್ಕೆ. ॥ ೧ ॥

ಇದೇ ಪ್ರಕಾರ ಜಗತೀಛಂದಸ್ಸಿನ ವಂಶಸ್ಥೇಂದ್ರವಂಶಾವೃತ್ತಗಳ ಪಾದಗಳಿಂದಲೂ ಉಪಜಾತಿವೃತ್ತವಾಗುತ್ತದೆ.

---

## ೬ನೆಯ ಸಂಧಿ. ಅರ್ಧಸಮವೃತ್ತಗಳು.

### ನಾಲ್ಕು ಚರಣದವು.

### ೮೫ ಆಖ್ಯಾತಕೀವೃತ್ತಂ. ೧.

ತೋರಲ್ಕಯುಗ್ಮಾಂಘ್ರಿ ತ ತಂ ಜ ಗಂ ಗಂ ।
ಬರಲ್ಕೆ ಯುಗ್ಮಾಂಘ್ರಿ ಜ ತಂ ಜ ಗಂ ಗಂ ॥
ಈ ರೀತಿಯಾಖ್ಯಾತಕಿಯೆಂಬವೃತ್ತಂ ।
ವಿರಾಮವಕ್ಕುಂ ಚರಣಾಂತದಲ್ಲಿ. ॥ ೧ ॥

### ೮೬ ಪುಷ್ಪಿತಾಗ್ರಾವೃತ್ತಂ. ೨.

ಬರೆ ಬೆಸದಡಿ ನ-ದ್ವಯಂ ರ ಯಂ ಗಳ್ ।
ಸರಿ ನ ಜ ಜಂ ರ ಗ ಮಿಂತು ಪುಷ್ಪಿತಾಗ್ರಂ. ॥

### ಉದಾಹರಣ:

ಲಲನೆಯರೊಡನಿರ್ಕೆ ಜೇನೆ ಜನ್ಮ- ।
ಸ್ಥಳದತಿಲೋಭಮಧೀರತಾಲಸತ್ವಂ ॥
ಕಲುಷಿತಮನಮಲ್ಪಲಾಭತೋಷಂ ।
ತಿಳಿಯೆ ಮಹತ್ವಕಿವೆಲ್ಲ ಬಾಧಕಂಗಳ್. ॥ ೧ ॥

೮೭ ಮಾಲ್ಯಭಾರಾವೃತ್ತಂ. ೩.

ಚರಣಂ ವಿಷಮಂ ಸ ಸಂ ಜ ಗಂ ಗಂ।
ಸರಿ ಸಂ ಭಂ ರ ಯ ಮಿಂತು ಮಾಲ್ಯಭಾರಂ.॥

ಉದಾಹರಣ:

ಸಖಿಯಂಪ್ರಿಯಲಕ್ತರೇಖೆಯಾರ್ದ್ರಂ।
ಸುಕರಂ ಕಂಗೊಳಿಕುಂ ವಯಸ್ಯ ನೋಡಯ್॥
ಸುಖದಂ ಹರದಗ್ಧಕಾಮವೃಕ್ಷ।
ಪ್ರಕಟಂ ಮುಂದಳಿರೆಂಬವೋಲಿದಿರ್ಕುಂ. ॥೧॥

೮೮ ಹರಿಣಪ್ಲುತಂ. ೪.

ಹರಿಣಪ್ಲುತಮೈ ಸ ಸ ಸಂ ಲ ಗಂ।
ಬರೆ ಬೆಸಂ; ನ ಭ ಭಂ ಗಮಿರಲ್ ಸಮಂ.॥

ಉದಾಹರಣ:

ಬಗೆ ಸಂತಸಮಾಳ್ದುದಾವನ।
ಮಿಗೆ ಸುಖಾವಹಮಾತನಿಗೀಜಗಂ॥
ತೊಗಲಂ ಪೊದಿಸರ್ದವೋಲಿರ್ಪುದೈ।
ತೊಗಲ ಜೋಡನೆ ಮೆಟ್ಟಿದವಂಗಿಳೆ. ॥೧॥

---

## ೩ನೆಯ ಸಂಧಿ.

ಹೊಸ ಕವಿತೆಗಳನ್ನು ಮಾಡುವವರಿಗೆ ಸೂಚನೆ.

ಕವಿತಾರಚನೆಯಿಂದ ಕೀರ್ತಿಯನ್ನು ದೊರಕಿಸಬೇಕೆಂಬ ಅಪೇಕ್ಷೆಯುಳ್ಳ ಜಿಜ್ಞಾಸುಗಳು ಮೊದಲು ಹಳೆಹೊಸಗನ್ನಡ ವ್ಯಾಕರಣಗಳನ್ನೂ ಛಂದಶ್ಶಾಸ್ತ್ರವನ್ನೂ ಚೆನ್ನಾಗಿ ಕಲಿಯಬೇಕು.

ಕನ್ನಡ ಕವಿತೆಗಳನ್ನು ರಚಿಸುವಾಗ ಸಂಸ್ಕೃತ ಶಬ್ದಗಳು ಬೇಕೇ ಬೇಕು. ಕಾರಣ ಸಂಸ್ಕೃತ ಶಬ್ದಗಳ ಸಂಧಿಸಮಾಸಗಳ ನಿಯಮಗಳನ್ನು ಓದಲಿಕ್ಕೆ ಬೇಕು.

ಹಳಗನ್ನಡದ ಪ್ರಾಚೀನ ಪ್ರಖ್ಯಾತ ಗ್ರಂಥಗಳನ್ನು ಓದಿ, ಅವುಗಳ ಅರ್ಥಗಳನ್ನು ತಿಳಿದುಕೊಳ್ಳಬೇಕು.

ಬೇಕಾದ ಶಬ್ದಗಳು ಬೇಕಾದಾಗ ನೆನಪಾಗುವಂತೆ ಕೋಶಗಳನ್ನು ಬಾಯಿಪಾಠ ಮಾಡಿರಬೇಕು.

ಕವಿತೆಯಲ್ಲಿ ಹಳಗನ್ನಡ ವ್ಯಾಕರಣವನ್ನು ಅನುಸರಿಸಬೇಕು. ಅದರಿಂದ ಪದ್ಯಕ್ಕೆ ಪ್ರೌಢಿಯೂ ಚೆಂದವೂ ಹೆಚ್ಚು ಬರುತ್ತದೆ.

ತಾವು ರಚಿಸಿದ ಕವಿತೆಗಳನ್ನು ನಿಷ್ಕಪಟ ಬುದ್ಧಿಯ ವಿದ್ವಾಂಸರಿಗೆ ತೋರಿಸಿ, ಅವರು ಹೇಳಿದ ದೋಷಗಳನ್ನು ಆಗಾಗ್ಗೆ ತಿದ್ದುತ್ತಿರಬೇಕು.

ತಮ್ಮ ಕವಿತೆಗಳಲ್ಲಿ ಅನ್ಯರು ದೋಷಗಳನ್ನು ತೋರಿಸಿದರೆ, ಸಿಟ್ಟಿಗೇಳದೆ ಅವರ ಉಪಕಾರಗಳನ್ನು ನೆನಸುತ್ತಿರಬೇಕು.

ಲೋಕಪ್ರಖ್ಯಾತ ಶಬ್ದಗಳನ್ನೇ ಪದ್ಯಗಳಲ್ಲಿ ಪ್ರಯೋಗಿಸುತ್ತಿರಬೇಕು. ಇಲ್ಲದ ಪ್ರೌಢಿಯನ್ನು ತೋರಿಸಬೇಕೆಂದು, ಏಕಾಕ್ಷರಿ-ನಿಘಂಟು ಮೊದಲಾದ ಅಪ್ರಸಿದ್ಧ ಗ್ರಂಥಗಳೊಳಗಿನ ದುರ್ಬೋಧ ಶಬ್ದಗಳನ್ನು ಕವಿತೆಯಲ್ಲಿ ಬರಗೊಡಬಾರದು. ಯಾಕಂದರೆ ಅಂಥ ಕವಿತೆಗಳಲ್ಲಿ ರಸವೂ ರಸಿಕಪ್ರೀತಿಯೂ ಇರುವದಿಲ್ಲ. ಆದರೂ ನೂರಕ್ಕೊಂದರಂತೆ ಅನಿರ್ವಾಹ ಪಕ್ಷಕ್ಕೆ ಎಲ್ಲಿಯಾದರೂ ಒತ್ತಟ್ಟಿಗೆ ಅಂಥ ಶಬ್ದವು ಬರಬಹುದು. ಆದರೆ ಅಲ್ಲಿ ಯಾವದಾದರೂ ಲೋಕೋತ್ತರ ಚಮತ್ಕಾರದ ವರ್ಣನೆಯು ಇರಲಿಕ್ಕೆ ಬೇಕು.

ಎಂಥ ಮಹಾಕವಿಯಾದರೂ ತನ್ನನ್ನು ತಾನೇ ಹೊಗಳಿಕೊಂಡರೆ, ಲಘುತ್ವವನ್ನು ಹೊಂದದೆ ಇರಲಾರನು. ಅದರಿಂದ ತಮ್ಮ ಕವಿತೆಗಳನ್ನು ತಾವೇ ಹೊಗಳಬಾರದು.

ರಾಜಶೇಖರದ ಪದಸಿದ್ಧಿಯನ್ನೂ ಸಾದ್ಯಂತವರ್ಣನೆಯನ್ನೂ ಜೈಮಿನಿಯ ಶಬ್ದಮಾಧುರ್ಯವನ್ನೂ ಸಮಯೋಚಿತಸಂಕ್ಷಿಪ್ತ-ವರ್ಣನೆಯನ್ನೂ ಸುಖಬೋಧಪ್ರಯೋಗಗಳನ್ನೂ ಗಿರಿಜಾಕಲ್ಯಾಣದ ಸರಸರಚನೆಯನ್ನೂ ಭಾರತ ರಾಮಾಯಣ ಮುಂತಾದ ಕಾವ್ಯಗಳ ಸ್ವಭಾವೋಕ್ತಿಗಳನ್ನೂ ಹೊಸಕವಿತೆಯನ್ನು ರಚಿಸುವವರು ಅನುಸರಿಸಬೇಕು. ಹಿಂದಿನ ಕನ್ನಡ ಕವಿಗಳಂತೆ ಯತಿಚ್ಛೇದವನ್ನು ಎಲ್ಲಿಯೂ ಮಾಡಬಾರದು.

ಯಾವದಾದರೊಂದು ವರ್ಣನೆಯನ್ನು ಕವಿತಾರೂಪದಿಂದ ಮಾಡುವಾಗ ಚಲೋ ಫಲಕೊಡುವ ಗಣವನ್ನು ಅಥವಾ ಶ್ರೀಕಾರವನ್ನು ಅಥವಾ ದೇವತಾಸ್ತುತಿಯನ್ನು ಮೊದಲು ಇಡಬೇಕು. ಅದರಿಂದ ಮುಂದೆ ವಿಘ್ನಗಳುಂಟಾಗುವದಿಲ್ಲ ಎಂದು ಹಿರಿಯರು ನಿಯಮ ಮಾಡಿದ್ದಾರೆ. ಅದನ್ನು ನಾವು ಅನುಸರಿಸಲಿಕ್ಕೆ ಬೇಕು.

ನೆನಪಿಡತಕ್ಕ ಸಂಗತಿಯನ್ನು ಕವಿತೆಯಲ್ಲಿ ರಚಿಸಿದ್ದರೆ, ಅದನ್ನು ಒಮ್ಮೆ ಬಾಯಿಪಾಠ ಮಾಡಿದರೆ, ಸಾಯುವ ವರೆಗೆ ಮರವಾಗುವದಿಲ್ಲ.

ಗೃಹಕೃತ್ಯಗಳಿಂದ ಬೇಸತ್ತ ಮನುಷ್ಯನು ಕವಿತೆಗಳನ್ನು ಅನ್ನುವದರಿಂದ ಬೇಸರ ಹೋಗಿ, ಮನಸಿಗೆ ಆನಂದವಾಗುತ್ತದೆ.

ಬಹಳ ಮಾತುಗಳನ್ನು ಸ್ವಲ್ಪದರಲ್ಲೇ ತಂದು ಹೇಳಲಿಕ್ಕೆ ಕವಿತೆಯಿಂದ ಬರುತ್ತದೆ.

ಸಂಸ್ಕೃತದಲ್ಲಿ ಶಬ್ದಗಳ ಲಿಂಗವಿಚಾರವು ಬಹಳ ಗಹನವಾಗಿದ್ದರೂ ಭಾಷಾವಿಸ್ತಾರವು ಬಹಳ ಇದ್ದರೂ ಆ ಲಿಂಗವಿಚಾರದ ಗ್ರಂಥಗಳು ಕವಿತಾರೂಪದಲ್ಲಿ ಇರುವದರಿಂದ ಅವೆಲ್ಲಾ ಕಲಿಯುವವರಿಗೆ ೪-೬ ತಿಂಗಳುಗಳಲ್ಲಿ ನಿರಾಯಾಸವಾಗಿ ತಿಳಿಯುತ್ತವೆ. ಹೀಗೆ ಕವಿತೆಯಿಂದ ಅನೇಕ ಲಾಭಗಳಿರುತ್ತವೆ.

ಪದ್ಯಗಳನ್ನು ಹೊಸದಾಗಿ ರಚಿಸುವವರು ಅವನ್ನು ಅನ್ನುವ ಧಾಟಿಯನ್ನು ಚೆನ್ನಾಗಿ ತಿಳಕೊಂಡಿರಬೇಕು. ಯಾಕಂದರೆ ಆ

ಧಾಟಿಯಂತೆ ಯಾವದೊಂದು ವಾಕ್ಯದ ಪದಗಳನ್ನು ಇಡುತ್ತ ಹೋದರೆ, ಆ ಪದಸಮೂಹವೇ ಪದ್ಯವಾಗುತ್ತದೆ. ಅದರ ಅಂತರ್ಗಣಗಳೆಲ್ಲ ಬಹುಶಃ ಕೂಡಿರುತ್ತವೆ; ಎಲ್ಲಾದರೂ ಒಂದು ಕೂಡದಿದ್ದರೆ, ಅದನ್ನಷ್ಟು ತಿದ್ದಿದರೆ ತೀರಿತು. ಆದರೆ ಧಾಟಿಯಲ್ಲಿ ಮಾತ್ರ ದೋಷವಿರಬಾರದು, ಅಂದರೆ ಅದರಿಂದ ಹ್ರಸ್ವಾಕ್ಷರವು ದೀರ್ಘವಾಗಿಯೂ ದೀರ್ಘಾಕ್ಷರವು ಹ್ರಸ್ವವಾಗಿಯೂ ಉಚ್ಚರಿಸಲ್ಪಡಬಾರದು.

---

## ಪದ್ಯದೋಷವಿವರಣೆಯು.

ಪದ್ಯಗಳಲ್ಲಿ ಕೆಳಗೆ ಬರೆಯಲ್ಪಡುವ ದೋಷಗಳು ಬರಬಾರದು. ದೋಷಗಳು ಮೂರು ವಿಧವಾಗಿವೆ. ಯಾವವೆಂದರೆ: (೧) ಪದದೋಷಗಳು, (೨) ವಾಕ್ಯದೋಷಗಳು, (೩) ಅರ್ಥದೋಷಗಳು.

ಮುಖ್ಯ ಮುಖ್ಯವಾದ ಪದದೋಷಗಳು:—

(೧) ಶ್ರುತಿಕಟುತ್ವ (ಕರ್ಣಕಠೋರತ್ವ).—ಉಚ್ಚರಿಸಲಿಕ್ಕೆ ಅಥವಾ ಕೇಳಲಿಕ್ಕೆ ಕಷ್ಟವಾಗುವಂಥ ಶಬ್ದಗಳನ್ನು ಪ್ರಯೋಗಿಸಿದರೆ, ಈ (ಶ್ರುತಿಕಟುತ್ವ) ದೋಷ ಬರುತ್ತದೆ.

ಉದಾಹರಣ:

**ಅನ್ಯರನ್ನು ತಿರಸ್ಕರಿಸಿ ಕಾರ್ತಾರ್ಥ್ಯವನ್ನು ತಂದುಕೊಳ್ಳುವದು ಮೌರ್ಖ್ಯವು.**

ಈ ಉದಾಹರಣದಲ್ಲಿ ಕಾರ್ತಾರ್ಥ್ಯ, ಮೌರ್ಖ್ಯ ಎಂಬೆರಡು ಶಬ್ದಗಳು ಕಷ್ಟದಿಂದ ಉಚ್ಚರಿಸಲ್ಪಡುತ್ತವೆ.

(೨) ಸಂಸ್ಕಾರಹೀನತ್ವ.—ವ್ಯಾಕರಣದ ನಿಯಮಗಳಿಂದ ಸಿದ್ಧವಾಗದ ಪದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುತ್ತದೆ.

ಉದಾಹರಣ:—ಜೈಮಿನಿ.

**ಆಸ್ಯಚಂದ್ರಾನಂದನಮಗೀಯಲಿ. ||**

ಇಲ್ಲಿ "ಆಸ್ಯ ಚಂದ್ರನು ಆನಂದಮಂ ನಮಗೆ ಈಯಲಿ" ಎಂಬ ಅರ್ಥವುಂಟು. ಆದರೆ ಮೂಲದಲ್ಲಿ ಚಂದ್ರ ಶಬ್ದಕ್ಕೂ ಆನಂದ ಶಬ್ದಕ್ಕೂ ನಿಯಮದಂತೆ ಪ್ರಥಮಾ ದ್ವಿತೀಯಾ ವಿಭಕ್ತಿಗಳ ಪ್ರತ್ಯಯಗಳು ಹತ್ತಿಲ್ಲ. ಮತ್ತು ಚಂದ್ರ ಶಬ್ದವನ್ನು ಆನಂದ ಶಬ್ದದೊಡನೆ ಸಂಧಿಯಿಂದ ಕೂಡಿಸತಕ್ಕದ್ದಲ್ಲ. ಏಕಂದರೆ ಅದು ಸಮಾಸವಲ್ಲ.

(೩) ಅಪ್ರಯುಕ್ತತ್ವ.—ಪ್ರಸಿದ್ಧ ಕವಿಗಳು ಪ್ರಯೋಗಿಸದ ಶಬ್ದಗಳನ್ನು ಉಪಯೋಗಿಸಿದರೆ, ಈ ದೋಷವಾಗುವದು.

ಉದಾಹರಣ:

**ಈ ಬಗ್ಗೆ ನಾಂ ಪೇಳ್ದಪೆಂ. ||**

ಇಲ್ಲಿ "ಬಗ್ಗೆ" ಶಬ್ದವು ಪ್ರಸಿದ್ಧ ಕವಿಗಳ ಪ್ರಯೋಗಕ್ಕೆ ವಿರುದ್ಧವಾಗಿದೆ.

(೪) ಗ್ರಾಮ್ಯತ್ವ.—ಕಾಡುಜನರಲ್ಲಿ ಮಾತ್ರ ರೂಢವಾಗಿರುವ ಪದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುವದು.

ಉದಾಹರಣ:

**ನೋಡಾಕ ಬಾ ಕಡ್ಡಿಯಂ. ||**

ಇಲ್ಲಿ "ಕಡ್ಡಿ", "ನೋಡಾಕ" ಈ ಎರಡು ಗ್ರಾಮ್ಯ ಶಬ್ದಗಳು.

(೫) ಅಶ್ಲೀಲತ್ವ.—ಅವಾಚ್ಯ ಅಥವಾ ಅಮಂಗಲ ಅಥವಾ ಅಶ್ರಾವ್ಯ ಶಬ್ದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುವದು.

ಉದಾಹರಣ:

**ಶುಭಾ ನುಡಿಯೇ ಮದಲಗಿತ್ತಿ ಅಂದರೆ ಹಂದರದೊಳಗೆಲ್ಲ ಬೋಳೆಯರು ಅಂದಳು.**

ಇಲ್ಲಿ "ಬೋಳೆಯರು" ಎಂಬ ಪದವು ಅಮಂಗಳವಾಗಿದೆ.

(೬) ಅನುಚಿತತ್ವ.—ಅಯೋಗ್ಯ ಶಬ್ದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುವದು. ಉದಾಹರಣ:—

**ರಣಯಜ್ಞಕ್ಕೆ ಪಶುಗಳಾಗುವ ಶೂರರು ವೀರಸ್ವರ್ಗವನ್ನು ಹೊಂದುತ್ತಾರೆ.**

ಇಲ್ಲಿ ಶೂರರಿಗೆ ಪಶುಗಳ ಸಾಮ್ಯವು ಅಯೋಗ್ಯವಾಗಿದೆ.

(೭) ಸಂದಿಗ್ಧತ್ವ.—ಅರ್ಥಕ್ಕೆ ಸಂಶಯ ಬರುವ ಪದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುವದು. ಉದಾಹರಣ:—

**ತಾವರೆಗಣ್ಣಿಂ ನೋಳ್ಪರ್.**

ಇಲ್ಲಿ ತಾವರೆಯಂಥ ಕಣ್ಣಿನಿಂದ ನೋಡುವರೋ, ಅಥವಾ ತಾವು ಅರೆಗಣ್ಣಿಂದ ನೋಡುವರೋ ಎಂಬ ಸಂಶಯ ಬರುತ್ತದೆ.

(೮) ಕ್ಲಿಷ್ಟತ್ವ.—ಕ್ಲೇಶದಿಂದ ಅರ್ಥವಾಗುವ ಪದಗಳನ್ನು ಪ್ರಯೋಗಿಸಿದರೆ ಈ ದೋಷವಾಗುವದು. ಉದಾಹರಣ:—

**ನಾರಿ ಶರಂ, ತದಂಗಜನೆ ಸಾರಥಿ, ತತ್ಪದ ಶತ್ರು ಮಿತ್ರರೇ।**
**ಸೇರಿದ ಗಾಲಿಗಳ್. ||**

ಇಲ್ಲಿ ನಾರಿಯಂದರೆ ಶಿವನ ಹೆಂಡತಿಯಾದ ವಿಷ್ಣುವೆಂದೂ ಆ ವಿಷ್ಣುವೇ ಬಾಣವೆಂದೂ ತದಂಗಜನೆ ಅಂದರೆ ಆ ವಿಷ್ಣುವಿನ ಅಂಗದಿಂದ ಹುಟ್ಟಿದವನೇ (ಬ್ರಹ್ಮನೇ) ಸಾರಥಿ ಎಂದೂ ಅರ್ಥವುಂಟು. ಈ ಅರ್ಥವು ಹೊರಡುವದು ಕಷ್ಟವದೆ.

(೯) ವಿರುದ್ಧಮತಿಕೃತ್ವ.—ಪ್ರಸ್ತುತಕ್ಕೆ ವಿರುದ್ಧವಾದ ಅರ್ಥವನ್ನು ಸೂಚಿಸುವ ಪದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುವದು. ಉದಾಹರಣ:—

**ನಿನಗೆ ಮಹಾಮಂಗಲವಾಗಲಿ.**

ಇಲ್ಲಿ "ಅಮಂಗಲವಾಗಲಿ" ಎಂದೂ ಪದವಾಗುವದು. ಆಶೀರ್ವಾದದಲ್ಲಿ ಇಂಥ ಪದಗಳಿರಬಾರದು.

(೧೦) ಅಸಮರ್ಥತ್ವ.—ರೂಢಿಯನ್ನು ನೋಡದೆ ಬರೇ ಯೋಗಾರ್ಥವ ಪ್ರಮಾಣಿಸಿ, ಪದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುವದು. ಉದಾಹರಣ:—

**ಬಾ ಪಂಕಜಾಸ್ಯೆ, ಸಖಿ ನೀರಜಕಂಠಿ ಬಾರೆ. ||**

ಇಲ್ಲಿ ನೀರಜ ಶಬ್ದಕ್ಕೆ ಶಂಖವೆಂಬ ಅರ್ಥವು ತೋರುತ್ತದೆ. ಆದರೆ ರೂಢಿಯು ಅರ್ಥವು ಕಮಲವೆಂಬದೇ. ಆದಕಾರಣ ಇದು ಅಸಮರ್ಥತ್ವವೆಂಬ ದೋಷವು.

(೧೧) ನೇಯಾರ್ಥತ್ವ.—ತನ್ನ ಸಂಕೇತದಿಂದ ಮಾತ್ರ ಅರ್ಥ ಹೊರಡುವ ಪದಗಳನ್ನು ಪ್ರಯೋಗಿಸಿದರೆ, ಈ ದೋಷವಾಗುವದು. ಉದಾಹರಣ:—

**ವಾದಿ-ಸಮ ನಾಂತ-ನಾಮವ |**
**ನಾದಂ ತಳೆದಾತನಳಿದುದೇಂ? ||**

ಇಲ್ಲಿ ವಾದಿ=ವಾವರ್ಣಾದಿಯಾದಂಥ, ಸಮ=ಮವರ್ಣ ಸಹಿತವಾದಂಥ, ನಾಂತ=ನವರ್ಣಾಂತವಾದಂಥ, ನಾಮವಂ ಅಂದರೆ "ವಾಮನ" ಎಂಬ ಹೆಸರನ್ನು ತಳೆದಾತನು ಅಳಿದದ್ದು ಏಂ? ಎಂದು ಅರ್ಥವದೆ. ಇದು ಕವಿಸಂಕೇತದಿಂದ ಮಾತ್ರ ತಿಳಿಯುವದು.

(೧೨) ನಿರರ್ಥಕತ್ವ.—ಪದ್ಯದ ಚರಣಕ್ಕಿರುವ ಅಕ್ಷರಗಳನ್ನು ತುಂಬಲಿಕ್ಕೆ ಅಂದರೆ ಪಾದಪೂರಣಕ್ಕೆ ಮಾತ್ರ ಪದವನ್ನು ಪ್ರಯೋಗಿಸಿದರೆ, ಈ ದೋಷವಾಗುವದು. ಉದಾಹರಣ:—

**"ಮಗನಂ ತಳ್ತಮರ್ದಪ್ಪಿ", ಪುಷ್ಪಮಂಜರಿ ಮಾಣ**
**ದಾಕ್ಷಣಮೆ ತಳ್ತುಡರ್ದಾಕಿರಾತನ ಮುಂಡೆಯಲ್ಲಿರೆ."**
**"ತಳ್ತು ಬಿಡಿದತ್ತಾರಕ್ತಮುಕ್ತಾಫಲಂ."**

ಈ ಮೂರು ಪದ್ಯಭಾಗಗಳಲ್ಲಿಯೂ "ತಳ್ತು" ಎಂಬ ಪದವು ನಿರರ್ಥಕವಾಗಿದೆ, ಅಂದರೆ ಅದರ ಅರ್ಥವು ವಾಕ್ಯಕ್ಕೆ ಬೇಕಾಗಿಲ್ಲ.

## ವಾಕ್ಯದೋಷಗಳು.

(೧) ನ್ಯೂನಪದತ್ವ.—ವಾಕ್ಯದಲ್ಲಿ ಅವಶ್ಯವಾಗಿ ಇರತಕ್ಕ ಪದವು ಇರದಿದ್ದರೆ, ಈ ದೋಷವಾಗುವದು.

ಉದಾಹರಣಗಳು:

(ಜೈಮಿನಿ ೧೩ನೇ ಸಂಧಿ, ೪೧ನೇ ಪದ್ಯ.)

"ಹರಿಹರವಿಭೇದವಂ ಮಾಡಿ ನಿಂದಿಸಿದವನ
ಗತಿಯಾಗಲಿ"

ಇಲ್ಲಿ "ಎನಗೆ" ಎಂಬ ಪದವು ಬೇಕು; ಅದು ಇಲ್ಲ.

ಅಥವಾ ಸ್ವಲ್ಪ ಅಪರಾಧವಿಲ್ಲದೆ ನೀನು ನನ್ನ ಮೇಲೆ ಸಿಟ್ಟಿಗೇಳುತ್ತೀ.

ಇಲ್ಲಿ "ಸ್ವಲ್ಪ" ಇದರ ಮುಂದೆ "ಆದರೂ" ಎಂಬ ಅವ್ಯಯವು ಬೇಕು; ಅದು ಇಲ್ಲ.

(೨) ಕಥಿತಪದತ್ವ.—ವಾಕ್ಯದಲ್ಲಿ ಒಮ್ಮೆ ಹೇಳಿದ ಪದವು ಪುನಃ ಬಂದರೆ, ಈ ದೋಷವಾಗುವದು.

ಉದಾಹರಣಗಳು:—(ಜೈಮಿನಿ ೨ನೇ ಸಂಧಿ ೧೫ನೇ ಪದ್ಯ.)

ಬೆಸಗೊಂಡನಿಂತೆಂದಾಮುನೀಂದ್ರನೆಲೆ ನೃಪತಿ ಭೂಮಂಡಲದ ಸಕಲಸಾಮ್ರಾಜ್ಯವಂ ಪಾಲಿಸುವ ನಿನ್ನ ಸಂತಸದೇಳ್ಗೆಗೆ || ಖಂಡನಂ ಮಾಳ್ಪುದಾನನದಿರವು ಸಾಕು ಮನದಂಡಲೆಯನೊರೆಯೆನಲ್ ||

ಇಲ್ಲಿ "ಬೆಸಗೊಂಡನಿಂತೆಂದು" ಎಂದು ಮೊದಲು ಹೇಳಿ, ಪುನಃ ಕಡೆಗೆ ಎನಲ್ ಎಂಬ ಅದೇ ಅರ್ಥದ ಮತ್ತೊಂದು ಪದವನ್ನು ಹೇಳಿದ್ದರಿಂದ ದೋಷವಾಯಿತು.

ಅಥವಾ ವಾಲ್ಮೀಕಿ ರಾಮಾಯಣದಲ್ಲಿ:

"ತೀರಿತುತ್ಸಹ ಕಮಲಿನಿಗೆ ಕೈಸೇರಿತುತ್ಸಹ ಕುಮುದಿನಿಗೆ."

ಇಲ್ಲಿ "ಉತ್ಸಹ" ಶಬ್ದದ ಪುನರುಕ್ತಿ ಅಥವಾ ಕಥಿತಪದತ್ವವದೆ.

(೩) ಸಮಾಪ್ತಪುನರಾತ್ತತ್ವ.—ಅನ್ವಯವು ಪೂರ್ಣವಾದ ಮೇಲೆ ವಿಶೇಷಣವನ್ನು ಹೇಳಿದರೆ, ಈ ದೋಷವು. ಉದಾಹರಣ:—

"ನಿದಾಘನಂ ನೀರದರಾಜನಟ್ಟಿದಂ ಧರಾತಿಸಂತಾಪದನಂ."

ಇಲ್ಲಿ ಅನ್ವಯ ಪೂರ್ಣವಾದ ಮೇಲೆ ಕರ್ಮಪದಕ್ಕೆ "ಧರಾತಿ ಸಂತಾಪದನಂ" ಎಂಬ ವಿಶೇಷಣವು ಬಂದದೆ.

(೪) ಅರ್ಧಾಂತರೈಕಪದತ್ವ.—ಪದ್ಯದ ಒಂದು ಅರ್ಧದೊಳಗಿನ ಅನ್ವಯದ ಒಂದೇ ಪದವು ಬೇರೊಂದು ಅರ್ಧದಲ್ಲಿದ್ದರೆ, ಈ ದೋಷವಾಗುವದು.

ಉದಾಹರಣ:

(ಕಂದ.)

ಆನತನಪ್ಪಿಂ ಪೊರೆಯ್ಯೆ।
ಶ್ರೀನಾಯಕ ನಿಮ್ಮ ಪದಸರೋರುಹಯುಗದೊಳ್ ॥
ಆನಾನತರಂ ಪೊರೆವುದು।
ಜಾನಂ ನಿಮಗಲ್ತೆ? ದೀನಜನಮುಂದಾರಾ. ॥೧॥

ಇಲ್ಲಿ ಪೂರ್ವಾರ್ಧದ ಅನ್ವಯದ ಕರ್ತೃವಾದ "ಆನು" ಎಂಬ ಒಂದೇ ಪದವು ಉತ್ತರಾರ್ಧದ ಆರಂಭಕ್ಕೆ ಬಂದದೆ.

(೫) ಪ್ರಸಿದ್ಧಿಹತತ್ವ.—ಪ್ರಸಿದ್ಧಿಯನ್ನು ಬಿಟ್ಟು ನುಡಿದರೆ, ಈ ದೋಷವಾಗುವದು. ಉದಾಹರಣ:—

"ಕುದುರೆ ಒದರುತ್ತದೆ."

ಇಲ್ಲಿ ಕುದುರೆಯ ಕೂಗಿಗೆ "ಒದರುತ್ತದೆ" ಎಂಬ ಪದವು ಬಂತು. ಆದರೆ ಲೋಕರೂಢಿ ಹೀಗೆ ಇಲ್ಲ, ಹೇಷಿಸುತ್ತದೆ, ಅಥವಾ ಹಳಗನ್ನಡದಲ್ಲಿ ಕಿಳಿರುತ್ತದೆ ಎಂಬ ರೂಢಿಯುಂಟು.

(೬) ಪ್ರಕ್ರಮಭಂಗ.—ಆರಂಭಿಸಿದ ಕ್ರಮವು ತಪ್ಪಿದರೆ, ಈ ದೋಷವಾಗುವದು.

ಉದಾಹರಣ:

(ಭಾರತ.)

**ಏಕೆ ಕನ್ನಡಿ ಕುರುಡರಿಗೆ ತಾನೇಕೆ ಸೊಳಗ ಶುದ್ಧಬಧಿರರಿ
ಗೇಕೆ ಮೂರ್ಖ ಸಮಾಜದಲಿ ಸಾಹಿತ್ಯ ಸನ್ನಾಹ.** ||

ಇಲ್ಲಿ ತಾದರ್ಥ್ಯವ ಹೇಳಲಿಕ್ಕೆ ಮೊದಲು ಎರಡು ಚತುರ್ಥಿಗಳನ್ನು ಹೇಳಿ ಬಳಿಕ ಮೂರನೇ ಪದವನ್ನು "ಮೂರ್ಖ ಸಮಾಜದಲಿ" ಎಂದು ಸಪ್ತಮ್ಯಂತವಾಗಿಟ್ಟದ್ದು ದೋಷವು. "ಮೂರ್ಖ ಸಮಾಜಕೆ" ಎಂದಿರಬೇಕು. ಅಥವಾ—

(ಜೈಮಿನಿ.)

**ಪ್ರಾಚೀನಿತಂಬಿನಿಯ ಮೊಗಬಿಂಬದೆಳನಗೆಯ |
ರೋಚಿಗಳೊ ಪೆರ್ಚುಗೆಯೊಳುಬ್ಬಿದ್ದ ಪಾಲ್ಗಡಲ |
ವೀಚಿಗಳೊ ಮನ್ಮಥನ ಕೀರ್ತಿಯ ಮರೀಚಿಗಳೊ
ನಿಜಕಾಂತನಂ ಕಾಣುತಾ** ||

**ನಾಚಿ ಬೆಳ್ಪೇರಿದಳೊ ರಾತ್ರಿವಧು ಚಲ್ಲಿದನೊ |
ಭೂಚಕ್ರಕಂಗಜಂ ಬೇಳುವೆಯ ಬೂದಿಯಂ |
ವಾಚಿಸುವೊಡರಿದೆನಲ್ ಪಸರಿಸಿತು ಚಂದ್ರಕಿರಣಂಗಳೆ
ಲ್ಲಾ ದೆಸೆಯೊಳು.** || ೧ ||

ಇಲ್ಲಿ ಚಂದ್ರಕಿರಣಗಳಿಗೆ ಪೂರ್ವಾರ್ಧದಲ್ಲಿ ೩ ಸಾದೃಶ್ಯಗಳು ಪ್ರಥಮಾಂತವಾಗಿವೆ. ಆದರೆ ಉತ್ತರಾರ್ಧದ ಎರಡು ಸಾದೃಶ್ಯಗಳು ಹಾಗೆ ಇರದೆ, ವಾಕ್ಯರೂಪದಿಂದವೆ. ಕಾರಣ ಪ್ರಕ್ರಮ ಭಂಗವಾಯಿತು.

(೨) ಅಕ್ರಮ.—ವಾಕ್ಯದಲ್ಲಿ ವಿರುದ್ಧಕ್ರಮವು ತೋರಿದರೆ, ಈ ದೋಷವಾಗುವದು. ಉದಾಹರಣ:—

ಕೀರ್ತಿಪ್ರತಾಪಗಳಿಂದ ಸೂರ್ಯಚಂದ್ರರು ಆಚ್ಛಾದಿಸಲ್ಪಟ್ಟರು.

ಇಲ್ಲಿ ಚಂದ್ರಸೂರ್ಯರೆಂದಿರಬೇಕು, ಅಥವಾ ಹಗಲು ರಾತ್ರಿಗಳಲ್ಲಿ ಚಂದ್ರ ಸೂರ್ಯರು ಬರುತ್ತಾರೆ.

(೮) ಸಂಕೀರ್ಣತ್ವ.—ಒಂದು ವಾಕ್ಯದಲ್ಲಿ ಮತ್ತೊಂದು ವಾಕ್ಯದ ಪದಗಳು ಕೂಡಿದರೆ, ಸಂಕೀರ್ಣತ್ವವಾಗುವದು.

ಉದಾಹರಣ:

ರಾಮನು ಪಾಠವನ್ನು ಊಟಕ್ಕೆ ಕಲಿತು ಹೋಗುತ್ತಾನೆ.

ಇಲ್ಲಿ "ಪಾಠವನ್ನು ಕಲಿತು" ಮತ್ತು "ರಾಮನು ಊಟಕ್ಕೆ ಹೋಗುತ್ತಾನೆ." ಈ ಎರಡು ವಾಕ್ಯಗಳ ಪದಗಳು ಒಂದರಲ್ಲಿ ಒಂದು ಕೂಡಿ ಅವೆ.

(೯) ಗರ್ಭಿತತ್ವ.—ಒಂದು ವಾಕ್ಯವನ್ನು ಆರಂಭಿಸಿ ನಡುವೇ ಮತ್ತೊಂದು ವಾಕ್ಯವನ್ನು ಮುಗಿಸಿ, ಬಳಿಕ ಮೊದಲಿನ ವಾಕ್ಯವ ಮುಗಿಸಿದರೆ, ಈ ದೋಷವಾಗುವದು.

ಉದಾಹರಣ:

(ರಾಮಾಯಣ.)

ನಾವು ಬೇಡೆವು ವಸ್ತು ವಾಹನ ।
ವಾವುದನು ಕೇಳರಸ ರಾಘವ, ।
ಜೀವನನು ಕೊಡು ಕಡೆಯ ಮಾತಿದು ಯಜ್ಞರಕ್ಷಣೆಗೆ. ॥

ಇಲ್ಲಿ ಮೊದಲಿನ ವಾಕ್ಯದ ಅಂಗವಾದ "ಯಜ್ಞರಕ್ಷಣೆಗೆ" ಎಂಬ ಪದವು ಮುಂದೆ ಬರುವದಿರಲಿಕ್ಕೇ "ಕಡೆಯ ಮಾತಿದು" ಎಂಬ ಎರಡನೆಯ ವಾಕ್ಯವು ನಡುವೆ ಬಂತು.

(೧೦) ಅಭವನ್ಮತಸಂಬಂಧತ್ವ.—ವಾಕ್ಯದೊಳಗಿನ ಪದಗಳ ಸಂಬಂಧವು ಬೇಕಾದ ಪದಗಳಿಗೆ ಹತ್ತುವಂತೆ ಇರದಿದ್ದರೆ, ಈ ದೋಷವಾಗುವದು.

ಉದಾಹರಣ:

(ರಾಮಾಯಣ.)

**ಕಂದ ಕೇಳ್ಳೈ ಕುಶನೆ ಚಿಂತೆಯ |**
**ಸಂದಣಿಯ ಸುಯ್ಲುಗಳ ಸೊಂಪುರೆ |**
**ಕಂದಿದಾನನದಿಳಿವ ಜಲಬಿಂದುಗಳ ಲೋಚನದ ||**
**ನಿಂದಿರುತ ಚೆರಗಾಗುತವನೀ |**
**ನಂದನೆಯುದೇನಾದಳೋ ಹಾ ಎಂದೆನುತ ಹಂಬಲಿಸಿ ಹಲು**
**ಬುತ ಹನುಮನೈತಂದ. || ೧ ||**

ಇಲ್ಲಿ ಪೂರ್ವಾರ್ಧದೊಳಗಿರುವ "ಸುಯ್ಲುಗಳ", "ಕಂದಿದಾನನದ", "ಲೋಚನದ" ಎಂಬ ಮೂರು ವಿಶೇಷಣಗಳ ಸಂಬಂಧವು ಉತ್ತರಾರ್ಧದ ಕಡೆ ಚರಣದಲ್ಲಿರುವ "ಹನುಮನು" ಎಂಬ ಪದಕ್ಕೆ ಹತ್ತಬೇಕು; ಆದರೆ ಅದು ದೂರದಲ್ಲಿರುವದರಿಂದ ಹತ್ತುವದಿಲ್ಲ.

(೧೧) ಅಸ್ಥಾನಸ್ಥಿತಪದತ್ವ.—ವಾಕ್ಯದೊಳಗಿನ ಪದಗಳು ಅಯೋಗ್ಯಸ್ಥಾನದಲ್ಲಿದ್ದರೆ, ಈ ದೋಷವಾಗುವದು.

ಉದಾಹರಣ:

ಮೇಲಿನ ಕವಿತೆಯಲ್ಲಿ "ಹನುಮನು" ಎಂಬ ಪದವು ಪೂರ್ವಾರ್ಧದ ಕಡೆಯ "ಲೋಚನದ" ಎಂಬ ವಿಶೇಷಣದ ಮುಂದೆ ಇರಬೇಕು; ಹಾಗಿರದೆ ಉತ್ತರಾರ್ಧದ ಕಡೆಗೆ ಬಂದದೆ. ಅಥವಾ— "ಎಲ್ಲಾ ಸ್ತ್ರೀಯರಲ್ಲಿ ಚಲುವಿಕೆಯಿಂದಲೇ ನೀನು ನನಗೆ ಬೇಕಾದವಳು" ಎಂಬಲ್ಲಿ ಅವಧಾರಣಾರ್ಥಕ ಏಕಾರವು "ಚಲುವಿಕೆಯಿಂದ" ಎಂಬ ಪದದ ಮುಂದೆ ಬಂದ ಕಾರಣ ಉಳಿದ ಗುಣವು ಅವಳಲ್ಲಿಲ್ಲವೆಂದು ಅರ್ಥವಾಗುವದು. ಅದು "ನೀನು" ಎಂಬ ಪದದ ಮುಂದೆ ಬರಬೇಕು.

(೧೨) ಛಂದೋಭಂಗವೂ ಯತಿಚ್ಛೇದವೂ.—ಛಂದಸ್ಸಿನ ನಿಯಮವು ತಪ್ಪಿದರೆ, ಛಂದೋಭಂಗವಾಗುವದು.

ಉದಾಹರಣ:

(ಕಂದ.)

**ಅರ್ಥದ ಮರ್ಮವನೆ ಮಾಣ್ದು |**
**ವ್ಯರ್ಥಂ ತಾಂ ಕಲಿತರೇನು ಪದಪದ್ಯಂಗಳ? ||**

ಇಲ್ಲಿ ೩ನೆಯ ಗಣವು "ನೆ ಮಾಣ್ದು" ಎಂಬದು ಜ ಗಣವಾಗುತ್ತದೆ. ಮತ್ತು ೮ನೆಯ ಗಣದ ಕಡೆ ವರ್ಣವು ಲಘುವಾಗಿದೆ. ಇವೆರಡೂ ಕಂದಲಕ್ಷಣಕ್ಕೆ ವಿರುದ್ಧವಾಗಿವೆ.

ಯತಿಚ್ಛೇದವನ್ನು ಹಿಂದೆ ಹೇಳಿದ್ದೇವೆ.

## ಅರ್ಥದೋಷಗಳು.

(೧) ಅಮತಪರಾರ್ಥತ್ವ.—ಪ್ರಸಂಗಕ್ಕೆ ವಿರುದ್ಧವಾದ ಅರ್ಥವಾದರೆ, ಈ ದೋಷವಾಗುವದು. ಉದಾಹರಣ:—

**ಹೃತ್ಕುಮುದ ಕೋರಕಂ ಬಿರಿಯೆ. ||**

ಇಲ್ಲಿ ಹೃದಯವೆಂಬ ಕುಮುದಪುಷ್ಪದ ಮೊಗ್ಗೆಯು ಬಿರಿಯಲಾಗಿ, ಅಂದರೆ ಹೃದಯವು ಅರಳಲು, ಅಂದರೆ ಸಂತೋಷಗೊಳ್ಳಲು, ಎಂಬ ಅರ್ಥವದೆ. ಆದರೆ "ಬಿರಿಯೆ" ಎಂಬ ಪದವನ್ನಿಟ್ಟ ಕಾರಣ ಹೃದಯವು ಬಿರಿಯಲು, ಅಂದರೆ ಎದೆ ಸೀಳಲು ಎಂಬ ವಿಪರೀತಾರ್ಥ ಹುಟ್ಟುತ್ತದೆ.

(೨) ಅಪುಷ್ಟತ್ವ.—ಮುಖ್ಯಾರ್ಥಕ್ಕೆ ಉಪಯೋಗವಿಲ್ಲದ ಅರ್ಥವನ್ನು ವರ್ಣಿಸಿದರೆ, ಈ ದೋಷವಾಗುತ್ತದೆ. ಉದಾಹರಣ:—

(ಕಂದ.)

**ಅಳಿಗೆ ಪಗೆಯಾದೊಡೇನೆ- |**
**ನ್ನಳಕಾಲಿಗೆ ಕೆಳೆಯಿದೆಂದು ಸಂಪಗೆಯ ಸಮು- ||**

ಜ್ವಲಮುಕುಲಕುಲಮನಾಯ್ದಳ್ ।
ಕಳಶಸ್ತನೆ ಕರಜರುಚಿರರುಚಿ ತುಳ್ಕುವಿನಂ. ॥ ೧ ॥

ಇಲ್ಲಿ ಸಂಪಗೆಯ ಮೊಗ್ಗೆಯ ಪ್ರಯೋಜನವನ್ನು ಹೇಳುವ ಮೊದಲಿನ ಮೂರು ಚರಣಗಳ ಅರ್ಥಕ್ಕೆ ಕಡೆಯ ಚರಣದಲ್ಲಿ ಹೇಳಿದ ಅರ್ಥವು ಬೇಕಾಗಿಲ್ಲ.

(೩) ಕ್ಲಿಷ್ಟತ್ವ:—ಬೇಗ ಬುದ್ಧಿಸ್ಥವಾಗದ ಅರ್ಥವನ್ನು ವರ್ಣಿಸಿದರೆ, ಈ ದೋಷವಾಗುವದು.

ಉದಾಹರಣ:

(ರಾಮಾಯಣ.)

ದನಿಯನದನಾಲಿಸಲು ತಾ ನಿಜ ।
ಜನಕನೊಯ್ಯನೆ ಬನದ ವನಿತೆಯು ।
ವಿನುತಲಾವಣ್ಯಾಂಬುವಿನ ಶೀತಲದ ಸೊಂಕಿನಲಿ ॥
ಅನುಪಮಾನದ ಪದ್ಮಗಂಧದ ।
ಘನತೆಯಲಿ ವಕ್ಷೋಜಯುಗದಿರು- ।
ಬಿನಲಿ ತಡೆತಡೆದೆಯ್ದಿದನು ನಿಜ ಸುತನ ಸರಿಸದಲಿ.
॥ ೧ ॥

ಈ ಪದ್ಯದ ಅರ್ಥವು ಪ್ರಕರಣದ ಸಂಬಂಧವು ತಿಳಿಯದೆ ಹೊರಡುವದಿಲ್ಲ. ಅದು ಹೇಗಂದರೆ—ಹನುಮಂತನು ಸೀತೆಯು ಎಲ್ಲಿರುವಳೋ ಎಂದು ಚಿಂತಿಸುತ್ತಿರುವಷ್ಟರಲ್ಲಿ, ನಿನ್ನ ಇಷ್ಟಾರ್ಥ ಸಿದ್ಧಿಯಾಗುವದೆಂದು ಆಕಾಶವಾಣಿಯಾಯಿತು. ಅದನ್ನು ಅವನು ಕೇಳುತ್ತಿರಲಾಗಿ ಅವನ ತಂದೆಯಾದ ವಾಯುವು ಸೀತೆ ಇದ್ದ ವನದ ಶೀತಳವಾದ ಸ್ಪರ್ಶದೊಡನೆಯೂ ಕಮಲಗಳ ಸುವಾಸನೆಯೊಡನೆಯೂ ಕೂಡಿಕೊಂಡು ಬೆವರಾರಿಸಿಕೊಳ್ಳುವ ಸ್ತ್ರೀಯರ ಸ್ತನಗಳ ಸಂಧಿಯಲ್ಲಿ ಸಿಕ್ಕು, ಮಂದವೇಗವುಳ್ಳವನಾಗಿ ತನ್ನ ಮಗನಾದ ಹನುಮಂತನ ಸಮೀಪದಲ್ಲಿ ಸುಳಿದನು.

(೪) ವ್ಯಾಹತತ್ವ.—ಹೇಳಿದ ಅರ್ಥಗಳಲ್ಲಿ ಪೂರ್ವಾಪರ ವಿರೋಧವಿದ್ದರೆ, ಈ ದೋಷವಾಗುವದು. ಉದಾಹರಣ:—

**ಉಣಲಿಕ್ಕಿಲ್ಲದವರು ಸೇವಿಗೆಪಾಯಸ ಉಂಡರು.**
**ಉಡಲಿಕ್ಕಿಲ್ಲದವರು ಪತವಾಳಿ ಪೀತಾಂಬರ ಉಟ್ಟರು.**
**ಹನುಮಪ್ಪ ಹಗ್ಗಾ ತಿನ್ನುವಾಗ ಪೂಜಾರಯ್ಯ ಸೇವಿಗೆ ಬಯಸಿದನು.**

(೫) ಪುನರುಕ್ತತ್ವ.—ಒಮ್ಮೆ ಹೇಳಿದ ಅರ್ಥವನ್ನೇ ಮತ್ತೂ ಹೇಳಿದರೆ, ಈ ದೋಷವಾಗುವದು. ಉದಾಹರಣ:—

**"ಅಸುರಸಂಹಾರಕನು ರಕ್ಕಸ**
**ರಸುವ ಹಿಂಡುವನಂಬುಜಾಕ್ಷಂ."**

ಇಲ್ಲಿ "ಅಸುರಸಂಹಾರಕನು", "ರಕ್ಕಸರಸುವ ಹಿಂಡುವನು" ಎಂಬ ೨ ಪದಗಳ ಅರ್ಥಗಳಿಗೆ ಭೇದವಿಲ್ಲ.

(೬) ದುಷ್ಕ್ರಮತ್ವ.—ಯೋಗ್ಯತೆಯ ಕ್ರಮವು ತಪ್ಪಿದರೆ, ಈ ದೋಷವಾಗುವದು. ಉದಾಹರಣ:—

**ಅರಸಾ, ನನಗೊಂದು ಕುದುರೆಯು ಕೊಡು,**
**ಅಥವಾ ದೊಡ್ಡದೊಂದು ಆನೆಯನ್ನೇ ಕೊಡು.**

ಇಲ್ಲಿ ಮೊದಲು ಆನೆಯನ್ನು ಬೇಡತಕ್ಕದ್ದಿತ್ತು.

(೭) ಸಂದಿಗ್ಧಾರ್ಥತ್ವ.—ಅರ್ಥಕ್ಕೆ ಸಂಶಯ ಬಂದರೆ, ಈ ದೋಷವಾಗುವದು. ಉದಾಹರಣ:—

"ಆಹನು ವಿಧಿಯಿಂ ವಿರಸನರಸಂ."

ಇಲ್ಲಿ ಅರಸು ವಿರಸನಾಗುವನೋ, ವಿರಸನು ಅರಸನಾಗುವನೋ ತಿಳಿಯುವದಿಲ್ಲ.

(೮) ಪ್ರಸಿದ್ಧಿವಿರುದ್ಧತ್ವ.—ಪ್ರಸಿದ್ಧಿಯ ವಿರುದ್ಧಾರ್ಥವನ್ನು ವರ್ಣಿಸಿದರೆ, ಈ ದೋಷವಾಗುವದು. ಉದಾಹರಣ:—

"**ತ್ರಿಶೂಲಮಂ ಶ್ರೀಪತಿ ತಾಳ್ದನಾಗಳ್.**"

ಇಲ್ಲಿ ವಿಷ್ಣುವಿನ ತ್ರಿಶೂಲಧಾರಣರೂಪವಾದ ಅಪ್ರಸಿದ್ಧಾರ್ಥದ ವರ್ಣನೆಯದೆ.

(೯) ವಿದ್ಯಾವಿರುದ್ಧತ್ವ.—ಶಾಸ್ತ್ರಕ್ಕೆ ವಿರೋಧವಾದ ಅರ್ಥವ ಹೇಳಿದರೆ, ಈ ದೋಷವಾಗುವದು.

**ರಾತ್ರಿಯಲ್ಲಿ ಸ್ನಾನ ಮಾಡಿ ಶಾಸ್ತ್ರಗಳನ್ನೋದುತ್ತಾನೆ.**

ಇಲ್ಲಿ ರಾತ್ರಿಸ್ನಾನವೆಂದದ್ದು ಶಾಸ್ತ್ರವಿರುದ್ಧವಾದ ಅರ್ಥವು. ಅಥವಾ—

"**ಪಾದಾಹತಂ ತರುಣಿಯಿಂ ಫಲಿಸಿತ್ತಶೋಕಂ.**"

ತರುಣಿಯರ ಪಾದಾಹತಿಯಿಂದ ಅಶೋಕವು ಹೂವಾಗುವದೆಂದು ಪ್ರಸಿದ್ಧಿಯುಂಟು; ಇಲ್ಲಿ ಫಲಿಸಿತೆಂದು ವರ್ಣಿಸಿದ್ದು ಅ ಶಾಸ್ತ್ರಕ್ಕೆ ವಿರುದ್ಧವಾಗಿದೆ.

(೧೦) ಅನಿಯಮನಿಯಮತ್ವ.—ಅವಧಾರಣವು ಬೇಕಾಗದಲ್ಲಿ ಅದನ್ನು ಹೇಳಿದರೆ, ಈ ದೋಷವಾಗುವದು. ಉದಾಹರಣ:—

"**ಸ್ವರ ಪರವಾದರೆ, ಅನಿತ್ಯ ಉಕಾರಕ್ಕೇ ಲೋಪ ಬರುತ್ತದೆ.**"

ಇಲ್ಲಿ "ಉಕಾರಕ್ಕೇ" ಎಂದು ಅವಧಾರಣ ಮಾಡುವದು ಅವಶ್ಯವಲ್ಲ, "ಉಕಾರಕ್ಕೆ" ಎಂದಿದ್ದರೆ ಸಾಕು.

(೧೧) ನಿಯಮಾನಿಯಮತ್ವ.—ಅವಧಾರಣವು ಬೇಕಾಗಿದ್ದಲ್ಲಿ ಅದನ್ನು ಹೇಳದಿದ್ದರೆ, ಈ ದೋಷವಾಗುವದು. ಉದಾಹರಣ:—

"ರಾಜಪದವಿಯನ್ನು ಕೊಟ್ಟರೆ,
ನಾನು ಸುಳ್ಳು ಹೇಳಲಾರೆನು."

ಇಲ್ಲಿ "ಕೊಟ್ಟರೂ" ಎಂಬ ಅವಧಾರಣವು ನಿತ್ಯವಾಗಿದ್ದರೂ ಅದನ್ನು ಹೇಳಲಿಲ್ಲ.

(೧೨) ಅವಿಶೇಷವಿಶೇಷತ್ವ.— ಸಾಮಾನ್ಯ ರೂಪದಿಂದ ಹೇಳುವದನ್ನು ವಿಶೇಷ ರೂಪದಿಂದ ಹೇಳಿದರೆ, ಈ ದೋಷವಾಗುವದು. ಉದಾಹರಣ:—

"ಬರೆ ತೆಗೆದಪ್ಪಿ ಚೀನವಸನಾಂಚಲಮಂ ನಸು ನೂಂಕಿ."

ಇಲ್ಲಿ "ವಸನಾಂಚಲಮಂ" ಎಂದು ಸಾಮಾನ್ಯವಾಗಿ ಹೇಳಿದರೆ ಸಾಕು; ಹೀಗಿದ್ದು "ಚೀನ" ಎಂಬ ವಿಶೇಷಣವನ್ನು ಹಚ್ಚಿದ್ದು ದೋಷವು.

(೧೩) ವಿಶೇಷಾವಿಶೇಷತ್ವ.— ವಿಶೇಷೋಕ್ತಿಯಿಂದ ಹೇಳುವದನ್ನು ಸಾಮಾನ್ಯೋಕ್ತಿಯಿಂದ ಹೇಳಿದರೆ, ಈ ದೋಷವಾಗುವದು. ಉದಾಹರಣ: —

"ವಿಹರಿಪ್ಪಳ್ ಕರಿಚಂದ್ರಕಾಳಿಯನೆ ನಿ
ತ್ಯಂ ಜಾರೆ ತಾನುಟ್ಟಿರುಳ್."

ಇಲ್ಲಿ "ಇರುಳ್" ಎಂದು ಸಾಮಾನ್ಯವಾಗಿ ಹೇಳಿದ್ದು ದೋಷವು; ಯಾಕಂದರೆ ಬೆಳದಿಂಗಳ ರಾತ್ರಿಯಲ್ಲಿ ಚಂದ್ರಕಾಳೀ ಸೀರೆಯನ್ನುಟ್ಟರೆ ಜಾರೆಯರಿಗೆ ಹಿತವಾಗುವದಿಲ್ಲ. ಅದರಿಂದ "ಕಾರಿರುಳ್" ಅಂದರೆ "ಕತ್ತಲೆಯ ರಾತ್ರಿಯಲ್ಲಿ" ಎಂದಿರಬೇಕಾಗಿತ್ತು.

(೧೪) ಸಾಕಾಂಕ್ಷತ್ವ.—ಹೇಳಿದ ಅರ್ಥವು ಯಾವದಾದರೊಂದು ಅರ್ಥದಿಂದ ನ್ಯೂನವಾಗಿದ್ದರೆ, ಈ ದೋಷವಾಗುವದು.

"ನಾನು ಇಂಥ ರಾತ್ರಿಯಲ್ಲಿ ನಿನ್ನ ಮನೆಗೆ ಬರಬೇಕಾಯಿತು."

ಇಲ್ಲಿ "ಯಾಕೆ ಬರಬೇಕಾಯಿತು?" ಎಂಬ ಪ್ರಶ್ನ ಹುಟ್ಟುತ್ತದೆ. ಅದಕ್ಕೆ ಸಮಾಧಾನವಿಲ್ಲದ್ದರಿಂದ ಇದು ಸಾಕಾಂಕ್ಷತ್ವವು.

ಸಹಚರಭಿನ್ನತ್ವ.—ವಿಜಾತಿಯ ಪದಾರ್ಥಗಳನ್ನು ಕೂಡಿಸಿದರೆ, ಅಂದರೆ ಅನೇಕ ಉತ್ತಮ ವಸ್ತುಗಳೊಡನೆ ಒಂದೇ ನೀಚ ವಸ್ತುವನ್ನಾಗಲಿ, ಅನೇಕ ನೀಚ ಪದಾರ್ಥಗಳೊಡನೆ ಒಂದೇ ಉತ್ತಮ ವಸ್ತುವನ್ನಾಗಲಿ ಕೂಡಿಸಿದರೆ, ಈ ದೋಷವಾಗುವದು.

ಉದಾಹರಣ:—

(ಆರ್ಯಾ.)

ದಾರಿದ್ರ್ಯಂ ಸುಜನಂಗಾ |
ನಾರೀವಕ್ಷೋರುಹಕ್ಕಧಃಪಾತಂ ||
ಸಾರಲ್ ಖಲಂಗೆ ಮಾನಂ |
ಧೀರಂಗಕ್ಕುಂ ಸದಾ ಮನಃಕ್ಲೇಶಂ. || ೧ ||

ಇಲ್ಲಿ ಸುಜನ, ವಕ್ಷೋರುಹಗಳೆಂಬೆರಡು ಒಳ್ಳೇ ವಸ್ತುಗಳ ಸಂಗಡ ಖಳನನ್ನು ಕೂಡಿಸಿದ್ದು ದೋಷವು. ಅಥವಾ—

"ಬಿಡಬೇಕ್ಕೈ ಧನಲೋಭಮಂ ಸ್ವಜನರೊಳ್,
ದುಷ್ಟಾತ್ಮರೊಳ್ ಗೋಷ್ಠಿಯಂ."

(೧೫) ಅಪಾರ್ಥತ್ವವು.—ಹೇಳಿದ ವಾಕ್ಯಗಳ ಅರ್ಥಗಳ್ಗೆ ಅನ್ಯೋನ್ಯ ಸಂಬಂಧವಿಲ್ಲದಿದ್ದರೆ, ಈ ದೋಷವಾಗುವದು.

ಉದಾಹರಣ:

ನೀರಿನಿಸಿಲ್ಲೀ ಕೆರೆಯೊಳ್ |
ಬಾರದು ಮೂರ್ಖಂಗೆ ಬುದ್ಧಿ ಬೋಧಿಸಿಯುಂ ||
ಸೋರುವದೀ ನವನಿಲಯಂ |
ಶೂರಂಗಾಹವದ ಸಾಧನಂ ಧೈರ್ಯಂ. || ೧

ಈ ಪದ್ಯದೊಳಗಿನ ವಾಕ್ಯಗಳಲ್ಲಿ ಅರ್ಥಾರ್ಥ ಸಂಬಂಧವಿಲ್ಲ.

(೧೬) ಪರುಷತ್ವ.—ಅಯೋಗ್ಯ ರೀತಿಯ ಕ್ರೂರತನವನ್ನು ವರ್ಣಿಸಿದರೆ, ಈ ದೋಷವಾಗುವದು. ಉದಾಹರಣ:—

**ಕಿಡಿಗೇಡಿಗಳೀ ಹುಡುಗರ್ |**
**ಪಿಡಿ ಕಟ್ಟಿವರಂ ಸುಡೊಯ್ದು ನಡೆ ಬೇಗಂ ||**
**ಕೊಡಲೊಂದು ಬಾಳೆವಣ್ಣಂ |**
**ಬಿಡರೆನ್ನಂ ಮತ್ತೆ ಬೇಡುವರ್ ಚೇರ್ವರ್. || ೧ ||**

ಇಲ್ಲಿ ಹುಡುಗರು ಮತ್ತೊಂದು ಹಣ್ಣನ್ನು ಬೇಡಿದ್ದಕ್ಕೆ ಅವರನ್ನು ಸುಡೆಂದು ವರ್ಣಿಸಿದ್ದು ಅಯೋಗ್ಯವಾದ ಕ್ರೂರತನವೇ.

(೧೭) ಅಶ್ಲೀಲತ್ವ.—ಹೇಸಿಕೆ, ನಾಚಿಕೆ ಬರುವ ಅರ್ಥವ ವರ್ಣಿಸಿದರೆ, ಈ ದೋಷವಾಗುವದು. ಉದಾಹರಣ:—

**ಸುಂಬುಳಮನತಿಪ್ರೇಮದೆ |**
**ತಿಂಬುದು ಕಾಕಾಳಿ ಸೂಕರಂ ಪೇಲಂ. ||**

ಈ ಪದ್ಯದಲ್ಲಿ ಹೇಸಿಕೆ ಬರುವಂಥ ಅರ್ಥವದೆ.

(೧೮) ವರ್ಣಿಸುವ ವಸ್ತುವಿಗೆ ಒಪ್ಪುವಂಥ ವರ್ಣನೆ ಇರಬೇಕು. ಹ್ಯಾಗಂದರೆ ದೇವತೆಗಳ ವರ್ಣನೆಯು ದೇವರಿಗೆ ತಕ್ಕಂತೇ, ಮನುಷ್ಯರ ವರ್ಣನೆಯು ಮನುಷ್ಯರಿಗೆ ತಕ್ಕಂತೇ ಇರಬೇಕು. ದೇವತೆಗಳಿಗೆ ಅತ್ಯಂತ ಶೋಕವೂ ಭಯವೂ ಒಪ್ಪುವದಿಲ್ಲ. ಮನುಷ್ಯರಿಗೆ ಸ್ವರ್ಗಪಾತಾಳಾದಿಗಳಿಗೆ ಹೋಗುವದೂ ಸಮುದ್ರವ ಹಾರುವದೂ ಮುಂತಾದ ಅಮಾನುಷ ಕೃತಿಗಳು ಶೋಭಿಸುವದಿಲ್ಲ. ಅದರಿಂದ ಇಂಥ ವರ್ಣನೆಗಳನ್ನು ಮಾಡಬಾರದು.

ಇದೇ ಮೇರೆಗೆ ಪಾರ್ವತೀಪರಮೇಶ್ವರರಂಥ ಉತ್ತಮ ದೇವತೆಗಳ ಸಂಭೋಗಶೃಂಗಾರವನ್ನು ವರ್ಣಿಸಿದರೆ, ತಾಯಿತಂದೆಗಳ

ಸಂಭೋಗವ ವರ್ಣಿಸಿದಂತೆ ಆಗುವದು; ಕಾರಣ ಅಂಥ ವರ್ಣನೆಯ ಮಾಡಬಾರದು.

ವಸ್ತುಗಳಿಗೆ ಒಪ್ಪದಂಥ ವರ್ಣನೆಯ ಮಾಡುವದರಿಂದ ಪ್ರಕೃತಿವಿಪರ್ಯಯವೆಂಬ ದೋಷವಾಗುತ್ತದೆ.

ಇದರಂತೇ ದೇಶಕಾಲಗಳ ಅನ್ಯಥಾ ವರ್ಣನೆಯಾದರೂ ದೋಷವಾಗಿದೆ, ಇಂಥಾ ಅನುಚಿತ ವರ್ಣನೆಯುಳ್ಳ ಗ್ರಂಥವು ಜನರ ಅವಿಶ್ವಾಸಕ್ಕೆ ಒಳಗಾಗಿ ಅಮಾನ್ಯವಾಗುತ್ತದೆ; ಕಾರಣ ಯಾವ ವರ್ಣನೆಯನ್ನಾದರೂ ಉಚಿತವಾಗಿಯೂ ಯಥಾರ್ಥವಾಗಿಯೂ ಮಾಡತಕ್ಕದ್ದು; ಅಂದರೆ ಆ ವರ್ಣನೆಯು ಲೋಕಮಾನ್ಯವಾಗುತ್ತದೆ. ಇನ್ನೂ ಬಗೆಬಗೆಯ ದೋಷಗಳುಂಟು. ಅವನ್ನೆಲ್ಲಾ ತಿಳಿದುಕೊಳ್ಳ ಮನಸ್ಸಿದ್ದವರು ಸಾಹಿತ್ಯಶಾಸ್ತ್ರವನ್ನೇ ಓದಬೇಕು.

## ದೋಷಗಳ ಗ್ರಾಹ್ಯತ್ವವು.

ಹಿಂದೆ ಹೇಳಿದ ದೋಷಗಳು ಒಂದೊಂದು ಕಡೆಗೆ ದೋಷರೂಪವಾಗಿರುವದಿಲ್ಲ, ಅಂದರೆ ಅವುಗಳಿಂದ ಕಾವ್ಯಕ್ಕೆ ದೋಷ ಬರುವದಿಲ್ಲ. ಮತ್ತು ಕೆಲಕೆಲವು ಕಡೆಗಂತೂ ಅವು ಕಾವ್ಯಕ್ಕೆ ಹೆಚ್ಚಿನ ಸೌಂದರ್ಯವನ್ನು ಕೊಡುತ್ತವೆ. ಆಗ ಅವುಗಳನ್ನು ಗುಣಗಳಲ್ಲಿ ಎಣಿಸುತ್ತಾರೆ. ಹೇಗಂದರೆ—

ಮಾತಾಡುವವನು ಸಿಟ್ಟಿನವನಿದ್ದರೆ, ಅಥವಾ ರೌದ್ರರಸವನ್ನಾಗಲಿ ಔದ್ಧತ್ಯವನ್ನಾಗಲಿ ವರ್ಣಿಸಬೇಕಾದರೆ, ಶ್ರುತಿಕಟುತ್ವವೆಂಬ ದೋಷವು ಗುಣರೂಪವಾಗುವದು.

ಶಾಂತರಸವನ್ನು ವರ್ಣಿಸುವಾಗ ದೇಹಾದಿಗಳನ್ನು ತಿರಸ್ಕರಿಸುವದಕ್ಕೆ ಉಪಯೋಗಿಸಿದ ಅಶ್ಲೀಲತ್ವವೆಂಬ ದೋಷವು ಗುಣವಾಗುವದು. ಉದಾಹರಣ:—

"ಹೊಟ್ಟೆಯಲ್ಲಿ ಮಲಮೂತ್ರಗಳ ಸಂಚಯವು, ಬಾಯಲ್ಲಿ ಲೋಳೆಯು, ಮೂಗಿನಲ್ಲಿ ಸುಂಬುಳವು, ಕಣ್ಣಲ್ಲಿ ಪಿಚ್ಚು, ಕಿವಿಯಲ್ಲಿ ಕೂಗಣೆ, ಮೈಯಲ್ಲಿ ಕೂದಲು ಇಂಥ ಹೊಲಸು ದೇಹವನ್ನು ಪ್ರಾಣಕ್ಕಿಂತ ಹೆಚ್ಚೆಂದು ನಂಬಿ, ಜನರು ಕೆಡುತ್ತಾರೆ."

ಇದೇ ಪ್ರಕಾರ ನಿಹತಾರ್ಥತ್ವವೂ ಅಪ್ರಯುಕ್ತತ್ವವೂ ಶ್ಲೇಷ ವರ್ಣನೆಯಲ್ಲಿ ಗುಣಗಳಾಗುತ್ತವೆ.

ನಿಹತಾರ್ಥತ್ವವೆಂದರೆ ಉಭಯಾರ್ಥದ ಪದವನ್ನು ಅಪ್ರಸಿದ್ಧಾರ್ಥದಲ್ಲಿ ಪ್ರಯೋಗಿಸೋಣ. ಉದಾಹರಣ:—

"ಬಾವಿಯಲ್ಲಿ ಕ್ಷೀರವಿಲ್ಲ."

ಕ್ಷೀರ ಶಬ್ದಕ್ಕೆ ನೀರು, ಹಾಲು ಎಂಬ ಎರಡರ್ಥಗಳಿವೆ. ನೀರೆಂಬರ್ಥವು ಅಪ್ರಸಿದ್ಧವು.

ವಿಷಾದ, ಆಶ್ಚರ್ಯ, ಕೋಪ, ದೈನ್ಯ, ಕರುಣ, ಪ್ರಾರ್ಥನೆ, ಪ್ರಸಾದನ, ಹರ್ಷ, ಅವಧಾರಣ, ಅನುಪ್ರಾಸ, ಅರ್ಥಾಂತರನ್ಯಾಸ, ಮುಂತಾದವುಗಳಲ್ಲಿಯೂ ವಿಹಿತಾರ್ಥವ ಹೇಳುವಲ್ಲಿಯೂ ಪುನರುಕ್ತಿಯು ದೋಷವಾಗದೆ ಗುಣವಾಗುತ್ತದೆ.

ಇವುಗಳಲ್ಲಿ ಕೆಲವಕ್ಕೆ ಉದಾಹರಣಗಳು:—

(ವಿಹಿತವನ್ನು ಹೇಳುವ ಪುನರುಕ್ತಿ.)

ಮಂದಮತಿ ನಿಂದಿಸಲು ತಾಳಿಕೊಳ್ವನೆ ಜಾಣ, |
ಬಂದೆ ಮನದಲಿ ಧರ್ಮವನು ಮಾಡುವನೆ ಜಾಣ, |
ಬಂದ ಬಲುಚಿಂತೆಯಲಿ ಧೈರ್ಯಗೊಳ್ವನೆ ಜಾಣ. | ಇತ್ಯಾದಿ.

(ವಿಷಾದದ ಪುನರುಕ್ತಿಯು.)

ಎಲ್ಲಿತ್ತೊ ಸಸಿಯು ಬೆಳುಗೊಡೆ, |
ಯೆಲ್ಲಿತ್ತೋ ಕುಸುಮಚಾಪವಿಭ್ರಮವಿಾಗಳ್ ||

(ಅರ್ಥಾಂತರನ್ಯಾಸದ ಪುನರುಕ್ತಿಯು.)

**ಪಾಲಪ್ಪುದೈ ಪಾಲದು ನೀರೆ ನೀರ್ತಂ. ||**

ಅರ್ಥಾಂತರನ್ಯಾಸವೆಂದರೆ ವಿಶೇಷವನ್ನು ಹೇಳಿ ಸಾಮಾನ್ಯ ವನ್ನು ಸೂಚಿಸೋಣ.

**ಹಾಲಿದ್ದದ್ದು ಹಾಲಾಗುತ್ತದೆ, ನೀರಿದ್ದದ್ದು ನೀರೇ ಆಗುತ್ತದೆ.**

ಈ ಮಾತಿನಲ್ಲಿ "ಉತ್ತಮ ವಸ್ತು ಉತ್ತಮವೇ, ಕೆಟ್ಟ ವಸ್ತು ಕೆಟ್ಟದೇ" ಎಂಬ ಸಾಮಾನ್ಯ ನೀತಿಯಿದೆ.

(ಅನುಪ್ರಾಸದ ಪುನರುಕ್ತಿಯು.)

**ರಾಮನಂ ಭುವನಾಭಿರಾಮನಂ ಗುಣರತ್ನ |**
**ಧಾಮನಂ ರವಿಕುಲೋದ್ದಾಮನಂ ರೂಪಜಿತ |**
**ಕಾಮನಂ ಸತ್ಕೀರ್ತಿಕಾಮನಂ.** || ಇತ್ಯಾದಿ.

ಇದರಂತೆ—ಜ್ಯಾ = ಬಿಲ್ಲಿನ ಹಗ್ಗ, ಮಾಲೆ = ಹೂವಿನ ಸರ, ಹಾರ = ಮುತ್ತಿನ ಸರ, ಎಂದು ನಿಯಮಿತಾರ್ಥಗಳಿದ್ದರೂ ಧನು ಜ್ಯಾ, ಪೂಮಾಲೆ, ಮುಕ್ತಾಹಾರ ಮುಂತಾದ ಪ್ರಾಚೀನ ಪ್ರಯೋ ಗಗಳಿವೆ. ಇಂಥಲ್ಲಿ ಧನುರ್ಜ್ಯಾ = ಬಿಲ್ಲಿಗೇರಿಸಿದ ಹಗ್ಗ, ಪೂಮಾಲೆ = ಉತ್ತಮ ಪುಷ್ಪಗಳ ಸರ, ಮುಕ್ತಾಹಾರ = ಅಚ್ಚ ಮುತ್ತುಗಳ ಸರ ಎಂದು ಅರ್ಥಗಳನ್ನು ಮಾಡುವ ರೂಢಿಯಿದೆ.

ಇಂಥ ಹಳೇ ಪ್ರಯೋಗಗಳನ್ನು ಹೊಸ ಕಾವ್ಯಗಳಲ್ಲಿ ತಂದರೆ ದೋಷವಿಲ್ಲ. ಆದರೆ ಜಘನಕಾಂಚಿ, ಕರಕಂಕಣ, ಇಂಥ ಅಪೂ ರ್ವವಾದ ಹೊಸ ಪ್ರಯೋಗಗಳನ್ನು ಮಾಡಿದರೆ ಮಾತ್ರ ದೋಷ ವಾಗಬಹುದು.

ಮತ್ತು — ವ್ಯಾಜಸ್ತುತಿಯಲ್ಲಿ ಬರುವ ಸಂದಿಗ್ಧತ್ವವೂ ನೀಚ ಅಥವಾ ಕ್ಷುಲ್ಲಕರ ಮಾತುಗಳನ್ನು ಹೇಳುವಾಗ ಬಂದ ಗ್ರಾಮ್ಯ

ತ್ವವೂ ಲೋಕರೂಢಿಯ ವರ್ಣನೆಯಲ್ಲಿ ನಿರ್ಹೇತುತ್ವವೂ ದೋಷಗಳಾಗುವದಿಲ್ಲ.

ಲೋಕರೂಢಿಯ ವಿರುದ್ಧವಾದ ಅರ್ಥವನ್ನು ವರ್ಣಿಸಿದರೆ, ಪ್ರಸಿದ್ಧಿವಿರುದ್ಧತ್ವವೆಂಬ ದೋಷವಾಗುವದೆಂದು ಹಿಂದೆ ಹೇಳಿಯದೆ. ಆದರೆ ಅದು ಕವಿಸಂಪ್ರದಾಯಕ್ಕೆ ಅನುಸರಿಸಿದ್ದರೆ, ದೋಷವಾಗುವದಿಲ್ಲ, ಗುಣವಾಗುವದು.

ಕವಿಸಂಪ್ರದಾಯಗಳಿಗೆ ಕವಿಸಂಕೇತಗಳೆಂತಲೂ ಹೆಸರುಂಟು. ಅವು ಯಾವವೆಂದರೆ—

ಆಕಾಶ ಪಾಪಗಳ ಬಣ್ಣವು ಕರಿದು; ಕೀರ್ತಿ, ಹಾಸ್ಯ, ಲಜ್ಜಾ, ಕಟಾಕ್ಷಗಳ ಬಣ್ಣವು ಬಿಳಿದು; ಪ್ರೀತಿ ಕ್ರೋಧಗಳ ಬಣ್ಣವು ಕೆಂಪದು; ನದಿಗಳಲ್ಲಿಯೂ ಸಮುದ್ರಗಳಲ್ಲಿಯೂ ತಾವರೆ ಕನ್ನೈದಿಲೆಗಳು ಇರುವವು. ವರ್ಷಾಕಾಲದಲ್ಲಿ ಹಂಸಗಳು ಮಾನಸಸರೋವರಕ್ಕೆ ಹೋಗುವವು. ಕೆರೆ ಸರೋವರಗಳಲ್ಲಿ ಹಂಸ ಕಾರಂಡವ ಚಕ್ರವಾಕಗಳು ಇರುತ್ತವೆ. ತರುಣಿಯರ ಪಾದಪ್ರಹಾರದಿಂದ ಅಶೋಕವೂ ಉಗುಳಿದ ಮದ್ಯದ ಸ್ಪರ್ಶದಿಂದ ಬಕುಳ ವೃಕ್ಷವೂ ಹೂ ಬಿಡುತ್ತವೆ.

ಕಾಮನ ಬಿಲ್ಲುಬಾಣಗಳು ಹೂವಿನವು, ಭ್ರಮರಪಂಕ್ತಿಯೇ ಅವನ ಬಿಲ್ಲಿನ ಹೆದೆಯು.

ಕಾಮಬಾಣದಿಂದಲೂ ಸ್ತ್ರೀನೇತ್ರಕಟಾಕ್ಷದಿಂದಲೂ ವಿರಹಸಂತಾಪದಿಂದಲೂ ತರುಣರ ಎದೆಯೊಡೆಯುತ್ತದೆ. ಸೂರ್ಯಕಿರಣಗಳಿಂದ ತಾವರೆಯೂ, ಚಂದ್ರಕಿರಣಗಳಿಂದ ನೈದಿಲೆಯೂ ಅರಳುತ್ತವೆ. ಗುಡುಗಿನಿಂದ ನವಿಲು ಕುಣಿಯುತ್ತದೆ. ಅಶೋಕಕ್ಕೆ ಫಲವೂ ಚಂದನಕ್ಕೆ ಫಲಪುಷ್ಪಗಳೂ ಇರುವದಿಲ್ಲ. ಚಂದ್ರಕಿರಣದಿಂದ ಚಂದ್ರಕಾಂತವು ಒಸರುತ್ತದೆ. ವಸಂತದಲ್ಲಿ ಜಾಜಿಗೆ ಹೂವಿಲ್ಲ—ಇತ್ಯಾದಿ.

ಇವಕ್ಕೆಲ್ಲಾ ದೊಡ್ಡ ಕಾವ್ಯಗಳನ್ನೋದಿದರೆ ಉದಾಹರಣ
ಳನ್ನು ಕಾಣಬಹುದು.

ಸಾರಾಂಶವೇನಂದರೆ, ದೋಷಗಳಲ್ಲಿರುವಂಥ ಕಾವ್ಯದ ಚ
ವನ್ನು ಕೆಡಿಸುವ ಗುಣವು ಪ್ರಸಂಗವಿಶೇಷದಿಂದ ನಷ್ಟವಾಗಿ,
ದೋಷಗಳು ಗುಣಗಳಾಗಿ ಕಾವ್ಯವನ್ನು ಅಲಂಕರಿಸುತ್ತವೆ.

# ಕಠಿನ ಶಬ್ದಗಳ ಕೋಶವು.

### ಅ

ಅಗಿಯಲು = ತಿನ್ನಲಿಕ್ಕೆ.
ಅಂಕೂರ = ಮೊಳಿಕೆ.
ಅಜಿನ = ಚರ್ಮ.
ಅಟ್ಟಹಾಸ = ಬಿರುನಗೆ.
ಅನಘ = ಪಾಪರಹಿತ.
ಅನ್ಯಥಾತ್ವ = ಬೇರೆ ರೀತಿ.
ಅಭ್ರಕೃಷ್ಣ = ಮೇಘವೆಂಬ ಕೃಷ್ಣ.
ಅಂಬಿಕೆ = ತಾಯಿ; ಪಾರ್ವತಿ.
ಅಯುಗ್ಮ = ಬೆಸ, ವಿಷಮ.
ಅಲರ್ವುಡಿ = ಹೂವಿನ ಹುಡಿ, ಪರಾಗ.
ಅವಿರುದ್ಧ = ವಿರೋಧವಿಲ್ಲದ್ದು.
ಅಸಮಗಣ = ವಿಷಮಸ್ಥಾನದ ಗಣ.
ಅಸುಗಂಧ = ಸುಗಂಧವಿಲ್ಲದ.
ಅಳವಟ್ಟವು = ಹೊಂದಿದವು.
ಅಳವಡಲು = ಒಳಗಾಗಲಿಕ್ಕೆ.
ಅಳುರು = ಹೆಚ್ಚಾಗು.
ಅಳ್ತಿ = ಪ್ರೀತಿ.

### ಆ

ಆನಂದನ = ಆನಂದ ಪಡಿಸೋಣ.
ಆರವೆ = ತೋಟ, ಆರಾಮ.
ಆರೋಗಣೆ = ಊಟ.

### ಇ — ಐ

ಇಂಚರವಕ್ಕಿ = ಕೋಗಿಲೆ.
ಇರ್ಪಾರದ = ದ್ರವ ಆರದ.
ಈರಡಿ = ಎರಡು ಪಾದ.
ಉಪಕರಣ = ಸಾಹಿತ್ಯ.
ಉರ್ವೆ = ಉಕ್ಕೇರಲು.
ಏಣಿ = ಹರಣಿ, ಚಿಗರಿ.
ಐಸಿರಿ = ಐಶ್ವರ್ಯ.
ಒಳ್ಪೊನಲ್ = ಒಳ್ಳೇ ಪ್ರವಾಹ.

### ಕ — ಖ

ಕರಣ = ಇಂದ್ರಿಯ.
ಕಲಿಕಾ = ಮೊಗ್ಗೆ.
ಕಲ್ಪಕುಜ = ಕಲ್ಪವೃಕ್ಷ.
ಕಲ್ಯಾಣಿ = ಒಳ್ಳೇ ಲಕ್ಷಣವುಳ್ಳವಳು.
ಕಾಂತ = ಮನೋಹರ.
ಕಾರ್ = ಮಳೆಗಾಲ.
ಕಾಲ = ಯಮ.
ಕಾಮಂ = ಕಾಮ.
ಕೀಳ್ಮದ = ಕೆಳಗೆ ಬಿದ್ದ ಮದ.
ಕೂಜತ್ = ಒದರುವ.
ಕೃತ್ತಿ = ಚರ್ಮ.
ಕೈಗಣ್ಮೆ = ಹೆಚ್ಚಾಗಲು.
ಕೋಟಲೆ = ಉಪದ್ರವ.
ಕೌಸುಮ = ಹೂವಿನ.
ಕ್ಲಿನ್ನ = ತೊಯ್ದು.
ಕ್ಷಾಮ = ರೇಸಿಮೆ.
ಖರಕರ = ಸೂರ್ಯ.
ಖರನೀರಸ = ತೀಕ್ಷ್ಣ ಹಾಗೂ ರಸವಿಲ್ಲದ.

## ಗ—ಘ

ಗಂಧಫಲಿ = ಸಂಪಿಗೆ ಮೊಗ್ಗೆ.
ಗುಚ್ಛ = ಗೊಂಚಲು.
ಗುಧಿ = ಗೊಂಡೆ.
ಘನಧ್ವನಿ = ಗುಡುಗು, ದೊಡ್ಡ ಶಬ್ದ.

## ಚ—ಝ

ಚುರ್ಚಿ = ಸುಟ್ಟು.
ಛಿದ್ರ = ದೋಷ, ತೂತು.
ಜಡಧಿಜ = ಸಮುದ್ರದಿಂದ ಹುಟ್ಟಿದವ, ಚಂದ್ರ, ಜಡಬುದ್ಧಿಯುವನ ಮಗ.
ಜಲಜಾಲಯೆ = ಲಕ್ಷ್ಮಿ, ನೀರಲ್ಲಿ ಹುಟ್ಟಿದ ಕಮಲದ ಮನೆಯುವಳು, ಅಂದರೆ ಶೀತಗುಣದವಳು.
ಜಲರುಹಾಕರ = ಸರೋವರ.
ಜೋಡೆ = ಹಾದರಗಿತ್ತಿ.
ಝುಷಕೇತನ = ಕಾಮ.

## ತ—ನ

ತಣ್ಗದಿರಂ = ಚಂದ್ರ.
ತಪನ = ಸೂರ್ಯ; ಕಾಸುವವ.
ತರಕ್ಷು = ಹುಲಿ.
ತಾರಾಪಂ = ಚಂದ್ರ.
ತಿವಳಿ = ಹೆಜ್ಜೆಯ ಗುರುತು.
ತ್ರಸದ್ = ಅಂಜುವ.
ದಕ್ಷ = ಸಮರ್ಥ, ದಕ್ಷಬ್ರಹ್ಮ.
ದಂದಶೂಕ = ಹಾವು.
ದಶನ = ಹಲ್ಲು.
ದಾಂಗುಡಿ = ರಂಗವಲ್ಲಿ.
ದಾವ = ಬೇಗೆ.
ಧೀರತನ = ಪಾಂಡಿತ್ಯ, ದಿಟ್ಟತನ.
ನಡೆ ನೋಡಿ = ಪರೀಕ್ಷಿಸಿ.
ನಂದನ = ತೋಟ, ಇಂದ್ರನ ವನ
ನವಗೆ = ನಮಗೆ.
ನಾರಿ = ಹೆದೆ; ಹೆಂಗಸು.
ನಿರಸ್ತಂ = ನಾಶವಾಯಿತು.
ನಿಲವು = ಸ್ಥಿತಿ.
ನಿಸ್ಯಂದಮಾನ = ಸೋರುವ.
ನೀರದ = ಮೋಡ; ಹಲ್ಲಿಲ್ಲದ್ದು.
ನೆಗಳ್ವರ್ = ಮಾಡುವರು.
ನೆಗೆದುದು = ಮೂಡಿತು.

## ಪ—ಮ

ಪದ್ಯೆ = ಮಾರ್ಗ.
ಪರಿರಂಭಕ = ಅಪ್ಪುವವ.
ಪವನಜಂ = ಭೀಮನು.
ಪಳವಿಗೆ = ನಿಶಾನಿ.
ಪಳಹಂ = ರಣಹಲಿಗೆ.
ಪಳೆಯಂತೆ = ಮೊದಲಿನಂತೆ.
ಪಾಟಲ = ಬಿಳಿಗೆಂಪು, ಪಾದರಿ.
ಪಾರುವದು = ಇಚ್ಛಿಸುವದು.
ಪಾರುಷ್ಯ = ನಿಷ್ಠುರತ್ವ.
ಪಾಲ್ಯ = ಪಾಲಿಸಲಿಕ್ಕೆ ಯೋಗ್ಯ.
ಪುಂಡರೀಕ = ಬಿಳೀ ಕಮಲ.
ಪೂವಳಿ = ಹೂಮಳೆ.
ಪೊದ್ದಲ್ = ಒದಗಲು.
ಪ್ರತೀತೆ = ಪ್ರಖ್ಯಾತೆ.
ಪ್ರತ್ನ = ಪುರಾತನ.
ಪ್ರಭ = ಸಮಾನ.
ಪ್ರವಾಳ = ತಳಿರು.
ಪ್ರವೃತ್ತ = ಆರಂಭಿಸಿದ.
ಪ್ರಾಚೇತಸ = ವಾಲ್ಮೀಕಿ.

ಪ್ರಾದುರ್ಭಾವ = ಉದಯ.
ಬರಿಕೈ = ಸುಂಡಿಲು.
ಬಲಾಹಿತ = ಇಂದ್ರ.
ಬಲಿ = ಪೂಜೆ.
ಬಾಣಪೀಠ = ಬಿಲ್ಲು.
ಬಿಸ = ಕಮಲದ ದೇಟು.
ಬಿಸುಗಣ್ = ಅಗ್ನಿನೇತ್ರ.
ಭಗಣ = ನಕ್ಷತ್ರಗಣ.
ಭವತ್ಪಾಣಿ = ನಿನ್ನ ಕೈ.
ಭವನ = ಮನೆ.
ಭಾಳವಿಲೋಚನ = ಹಣೆಗಣ್ಣು.
ಭೂತ = ಪ್ರಾಣಿ, ಪಿಶಾಚಿ.
ಭೂರಿ = ಬಹಳ.
ಭೂರಿಪು = ಭೂಮಿಾವೈರಿ.
ಭೂರುಹ = ಗಿಡ.
ಮಧು = ವಸಂತ.
ಮಧುಪ = ತುಂಬಿ; ಸೆರೆಗುಡಿಕ.
ಮಂದಾಕ್ರಾಂತ=ಮಂದವಾಗಿ ಆಕ್ರಮಿಸಿದ.
ಮಾಕರಂದ=ಮಕರಂದರಸ, ಜೇನು.
ಮಾನಂದನ=ಲಕ್ಷ್ಮೀಪುತ್ರ, ಕಾಮ.
ಮಾರಣ = ಸಂಹಾರ.
ಮಿಡುಕಾರದ = ಚಲಿಸುತ್ತಿರುವ.
ಮಿಳಿರು = ಹೆಚ್ಚಾಗು.
ಮುಕ್ತ = ಬಿಟ್ಟ, ಪ್ರಕಟಿತ.
ಮುಗುಳ್ = ಮೊಗ್ಗೆ.
ಮೂಗಣ = ಮೂರುಗಣ.
ಮೈದೋರು = ಬರು.
ಯುಗ್ಮ = ಸರಿ; ಸಮ, ಎರಡು.
ರಂಗ = ಮಧ್ಯಭಾಗ.
ರತಿಪಾಲ = ಕಾಮ.
ರಥ್ಯ = ರಥದ ಕುದುರೆ.
ಲಕ್ಷ್ಮ = ಕಲಂಕ, ಚಿಹ್ನ.
ಲಂಡ = ಲಂಡಿಕೆ.
ಲಪಿತ = ಹೇಳಲ್ಪಟ್ಟ.

## ವ

ವಧೂ = ಸೊಸೆ.
ವಧ್ಯ = ಕೊಲ್ಲಲ್ಪಡತಕ್ಕ.
ವನಾಂತ = ವನದ ನಡುಭಾಗ.
ವಾಙ್ನಿಯಮನ = ಮಿತ ಭಾಷೆ.
ವಾಚಸ್ಪತಿ = ಬೃಹಸ್ಪತಿ.
ವಾಮ = ಸುಂದರ.
ವಾರ = ಸಮುದಾಯ.
ವಾರಾಶಿ = ಸಮುದ್ರ.
ವಾರಿಣಿ = ನಿವಾರಿಸುವವಳು.
ವಿಕಾಸ = ಅರಳುವಿಕೆ.
ವಿಶದ = ಶುಭ್ರ.
ವೀಜಿಕೆ = ಬೀಸಲಿ.
ವೃದ್ಧೋಕ್ಷ = ಮುದಿಯೆತ್ತು.
ವ್ಯಾಮಿಶ್ರ = ಕೂಡಿದ.

## ಶ.

ಶಕ್ತಿ = ಶಕ್ತಿದೇವತೆ, ಬಲ.
ಶತಮುಖ = ಇಂದ್ರ.
ಶಮನ = ಯಮ.
ಶಮಿತ = ಕೊಲ್ಲಲ್ಪಟ್ಟ.
ಶರಧಿ = ಸಮುದ್ರ.
ಶಶಧರ = ಚಂದ್ರ.
ಶಿಲೋಚ್ಚಯ = ಬೆಟ್ಟ.
ಶಿವೇತರ = ಅಮಂಗಲ.
ಶೂನ್ಯ = ರಹಿತ.

ಶ್ಚ್ಯೋತ = ಸ್ರಾವ.
ಶ್ರೀದ = ಕುಬೇರ.

## ಸ

ಸತ್ತಿಗೆ = ಛತ್ರಿಕೆ.
ಸದ್ಯ = ತತ್‌ಕ್ಷಣ, ಬೇಗ.
ಸನಾಥ = ನಾಥನುಳ್ಳ.
ಸಂತರ್ = ಸಜ್ಜನರು.
ಸಮಗಣ = ಸಮಸ್ಥಾನದ ಗಣ.
ಸಮೃದ್ಧಿ = ಸಂಪತ್ತಿ.
ಸರಿಗೆ = ಸಮಪಾದಕ್ಕೆ.
ಸಾಧನ್ಯ = ಸಧನತ್ವ, ಸಂಪತ್ತಿ.
ಸಾಂದ್ರ = ದಟ್ಟ.
ಸಾಮಜ = ಆನೆ.
ಸಾರಸಾರ = ಕಮಲದಳ.
ಸಿದ್ಧರಸ = ಭಂಗಾರ ಮಾಡುವ ರಸ
ಕಿಮಿಯಾ.
ಸಿಂಧು = ಸಮುದ್ರ.
ಸಿಂಧುರನಗರ = ಹಸ್ತಿನಾವತಿ.
ಸಿರಿಗುವರ = ಕಾಮ.
ಸುಕುಮಾರ = ಎಳೆ.
ಸುಮ = ಹೂವು.
ಸುಮನೋರಮಣ = ಇಂದ್ರ.
ಸುವೃತ್ತ = ದುಂಡಗಿನ, ಒಳ್ಳೇ ನಡ
ತೆಯುಳ್ಳ.
ಸೃಣಿ = ಅಂಕುಶ.

## ಹ

ಹರಣ = ಪ್ರಾಣ.
ಹರಿತ್ = ದಿಕ್ಕು.
ಹಿಮತಾಂಬೂಲ = ಕರ್ಪೂರತಾಂ [ಬೂಲ.
ಹಿಮಾಗ = ಹಿಮಾಚಲ.

